# ಶ್ರೀನಿವಾಸ ಕಲ್ಯಾಣ

ಲೇಖಕಿ :

ವಿದ್ಯಾವಾಚಸ್ಪತಿ,

**ಡಾ || ರುಕ್ಮಿಣಿ ಗಿರಿಮಾಜಿ**

ಎಂ.ಎ.ಪಿ.ಎಚ್‌ಡಿ

ನಂ. 296, ಮೊದಲನೇ ಮಹಡಿ

10ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ

ಗೋಕುಲ-ಮೊದಲಹಂತ-ಎರಡನೆಯ ಘಟ್ಟ

ಬೆಂಗಳೂರು - 560 054

ಶ್ರೀನಿವಾಸ ಕಲ್ಯಾಣ
**Srinivasa Kalyana**

ಲೇಖಕಿ : ವಿದ್ಯಾವಾಚಸ್ಪತಿ ಡಾ || ರುಕ್ಮಿಣಿ ಗಿರಿಮಾಜಿ, ಎಂ.ಎ.ಪಿ.ಹೆಚ್‌ಡಿ

ಪುಟಗಳು : viii + ೧೨೯
Pages : viii + 129

ಮೊದಲನೆ ಮುದ್ರಣ : ೧೯೯೯ ಮಾರ್ಚ್



ಪ್ರಕಾಶಕರು :
**ಡಾ || ರುಕ್ಮಿಣಿ ಗಿರಿಮಾಜಿ, ಎಂ.ಎ.ಪಿ.ಹೆಚ್‌ಡಿ**
ನಂ. 296, ಮೊದಲ ಮಹಡಿ 10ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ
ಗೋಕುಲ-ಮೊದಲಹಂತ-ಎರಡನೆಯ ಘಟ್ಟ
ಬೆಂಗಳೂರು - 560 054

This Book is printed and published with kind financial help of the Executive officer T.T. Shree Venkateshwaraswamy Devasthanam, Tirupathi under their Scheme "Aid to Publish Religious Books."

Price : **Rs. 40-00**     ಬೆಲೆ : ನಾಲ್ವತ್ತು ರೂಪಾಯಿಗಳು

Printed at
**Sathyasri Printers Pvt Ltd.,**
164, 5th Main, Chamarajpet
Bangalore - 560 018
Phone : 625736

"ಶಿಲೆಯೆ ಸಾಲಗ್ರಾಮ ಹೊಳಲೆ ಸುದರುಶನ
ಥಳಥಳಿಸುವಾ ವರ್ಣ ಮಳಲೆ ಚಕ್ರಾಂಕಿತ
ಇಳೆಯೊಳಗಿದೆ ನಿಚ್ಚಲ ವೈಕುಂಠ ನಗರ
ಸಲೆಶ್ವೇತದ್ವೀಪ ಇದೆ ಪೊಳೆವನಂತಾಸನ"

– ವಿಜಯದಾಸರು

# ಮಂಗಳಾಚರಣೆ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್
ಪ್ರಸನ್ನ ವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ 1

ಜಯತಿ ಶ್ರೀರಮಾಕಾಂತೋ ಜಯತಿ ಶ್ರೀಶ್ಚತತ್ಪ್ರಿಯಾ
ಶ್ರೀ ಶ್ರೀ ಶಭಕ್ತೋಜಯತಿ ಮಧ್ವೋ ವಿಧ್ವಸ್ತಸಾ ಧ್ವಸಃ 2

ಅಂಬಾ ಪೀತಾಂಬರ ಶ್ರೋಣೀಂ ಲಂಬಾಲಕಾಲಸನ್ಮುಖೀಂ
ಬಿಂಬಾಧರೋಷ್ಠೀಂ ಕಸ್ತೂರಿ ಜಂಬಾಲ ತಿಲಕಾಂ ಭಜೇ 3

ಬ್ರಹ್ಮಾದ್ಯಾ ವಿಬುಧ ಶ್ರೇಷ್ಠಾಃ ಬ್ರಹ್ಮಣ್ಯಾದ್ಯಾಃ ಸುರಾಂಗನಾಃ
ಯಾಂ ಪೂಜಯಂತೇ ಸ್ಮೈವಂತೇ ಸಾಮಾಂಪಾತು ರಮಾಸದಾ 4

ಜ್ಞಾನೇ ವಿರಾಗೇ ಹರಿಭಕ್ತಿ ಭಾವೇಃ
ಧೃತಿ ಸ್ಥಿತಿ ಪ್ರಾಣ ಬಲೇಷುಯೋಗೇ!
ಬುದ್ಧೌ ಚನಾನ್ಯೋ ಹನುಮತ್ಸಮಾನಃ
ಪುಮಾನ್ ಕದಾಚಿತ್ ಕ್ವಚ ಕಶ್ಚನೈವ 5

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ
ಆನಂದ ತೀರ್ಥ ಮತುಲಂಭಜೇ ತಾಪತ್ರಯಾಪ ಹಮ್ 6

ಸರಸ್ವತೀಂ ನಮಸ್ಯಾಮಿ ಚೇತನಾನಾಂ ಹೃದಿ ಸ್ಥಿತಾಮ್
ಕಂಠಸ್ಥಾಂ ಪದ್ಮಯೋನೇಸ್ತು ಹಿಮಾಕರ ಪ್ರಿಯಂಸದಾ 7

ಭವತಿಯದನು ಭಾವಾದೇಡ ಮೂಕೋಪಿ ವಾಗ್ಮೀ
ಜಡಮತಿರಪಿ ಜಂತು ಜಾನಯತೇ ಪ್ರಾಜ್ಞ ಮೌಲೀ
ಸಕಲ ವಚನ ಚೇತೋದೇವತಾ ಭಾರತೀ ಸಾ
ಮಮವಚಸಿ ನಿಧಸ್ತಾಂ ಸನ್ನಿಧಿಂ ಮಾನಸೇ ಚ 8

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥ ಪ್ರದಾಯಿನೇ
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯತೇನಮಃ 9

# ಮೊದಲು ಮಾತುಗಳು

ಪ್ರಕೃತ ನಿಮ್ಮ ಹಸ್ತದಲ್ಲಿರುವ "ಶ್ರೀನಿವಾಸ ಕಲ್ಯಾಣ" ಅಥವಾ ಪದ್ಮಾವತಿ ಪರಿಣಯದ ಕಥೆಯು ಯಾರಿಗೆ ತಾನೇ ವಿದಿತವಿಲ್ಲ; ಇದರಲ್ಲಿ ಯಾವದೂ ಹೊಸದಲ್ಲದಿದ್ದರೂ ಓದಿದಾಗೊಮ್ಮೆ ಹೊಸದೆನಿಸುತ್ತದೆ; ವಿದ್ಯಾವಾಚಸ್ಪತಿ ಡಾ॥ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರು ಪಾರಾಯಣ ಮಾಡಲು ಅನುಕೂಲವಾಗುವಂತೆ ವಿವಿಧ ಪುರಾಣಗಳನ್ನಾಧರಿಸಿದ ಶ್ರೀ ವೆಂಕಟೇಶ್ವರನ ವಿವಾಹದ ಸಂಕ್ಷಿಪ್ತ ವರ್ಣನೆಯನ್ನು ಗದ್ಯರೂಪದಲ್ಲಿ ಭಕ್ತರ ಮುಂದಿಟ್ಟಿದ್ದಾರೆ. ಭಾವಿಕರಿಗೆ ಈ ಗ್ರಂಥವು ಅತ್ಯಂತ ಮನೋಜ್ಞವಾಗಿ ಕಂಡರೆ ಆಶ್ಚರ್ಯ ಪಡಬೇಕಾಗಿಲ್ಲ. ನಿತ್ಯವೂ ನಾವು ನೈವೇದ್ಯಯ ಕಾಲಕ್ಕೆ ದ್ವಾದಶ ಸ್ತೋತ್ರದ ನಾಲ್ಕು ಸಾಲುಗಳನ್ನಾದರೂ ಪಠಿಸುತ್ತೇವೆ. ಕಾರಣ ಅದಕ್ಕೆ ಅದರದೇ ಮಹತ್ವವಿದೆ. ಪಾವಿತ್ರ್ಯವಿದೆ; ಹಾಗೆ ಶ್ರೀ ವೆಂಕಟೇಶ್ವರನ ಪಾರಾಯಣ ಎಷ್ಟುಸಲ ಮಾಡಿದರೂ ಕಡಿಮೆಯೇ; ಈ ಪುಸ್ತಕದ ಕೊನೆಯಲ್ಲಿ ಶ್ರೀವೆಂಕಟೇಶ್ವರ ದೇವರ ಸ್ತೋತ್ರಗಳನ್ನೇ ಕೊಟ್ಟು ಸುಲಭದಲ್ಲಿ ಅವುಗಳು ಒಂದೆಡೆ ಲಭ್ಯವಾಗುವಂತೆ ಮಾಡಿ ಸ್ತುತ್ಯಕಾರ್ಯಮಾಡಿದ್ದಾರೆ.

ಪದ್ಮಾವತಿ ಪರಿಣಯದ ಕಥೆಯನ್ನು ಹೇಳುವಾಗ ಲೇಖಕಿ ಮಾಧ್ವ ತತ್ವಕ್ಕೆ ಎಲ್ಲಿಯೂ ಅಪಚಾರವಾಗದಂತೆ ಜಾಗ್ರತೆಯನ್ನು ವಹಿಸಿದ್ದಾರೆ. ಕಾರಣ ವಾಯುಪುತ್ರ ಆಂಜನೆಯನ ಹುಟ್ಟಿದ ಬಗ್ಗೆ ವಿವಿಧ ಪುರಾಣಗಳು ವಿವಿಧ ರೀತಿಯಲ್ಲಿ ಹೇಳಲ್ಪಟ್ಟಿವೆ; ಅವನನ್ನು ಕೆಲವರು ರುದ್ರಸಮೋತ್ಪನ್ನ ಎಂದು ವರ್ಣಿಸಿವೆ. ಆದರೆ ಇಲ್ಲಿ ವಾಯುದೇವರು ಅಂಜನಾ ತಪಸ್ಸು ಮಾಡುವಾಗ ನಿತ್ಯವೂ ತಂದು ಕೊಡುತ್ತಿದ್ದ ಹಣ್ಣುಗಳಲ್ಲಿ, ಒಂದು ಸಲ ತನ್ನ ಅಂಶವನ್ನು ಹಾಕಿ ಕೊಟ್ಟನು, ಅದರ ಸೇವನೆಯಿಂದ ಅಂಜನಾ ಗರ್ಭವತಿಯಾಗಿ ಪುತ್ರನನ್ನೇ ಪಡೆದಳು ಎಂದಿದ್ದು ಮಾಧ್ವರಿಗೆ ಹೆಚ್ಚು ಸಮಂಜಸವಾಗಿ ಕಾಣುತ್ತದೆ. ಪ್ರಾಜ್ಞರು, ಅನುಭವಿಗಳೂ ಆದ ಶ್ರೀ ರುಕ್ಮಿಣಿ

ಗಿರಿಮಾಜಿಯವರ ಈ ಪ್ರಯತ್ನವು ಪ್ರಶಂಸಾರ್ಹ, ಶ್ರೀ ವೆಂಕಟೇಶ್ವರನು ಎಲ್ಲರಿಗೂ ಸನ್ಮಂಗಳವನ್ನು ಉಂಟು ಮಾಡಲಿ.

**ಗೋವಿಂದ ಮೂರ್ತಿ ದೇಸಾಯಿ**

ಗೀತಾಂಜಲಿ 17, ಎಸ್.ಬಿ. ಆಯ್ ಆಫೀಸರ್ ಕಾಲೋನಿ
ಬಸವೇಶ್ವರ ನಗರ, ಬೆಂಗಳೂರು - 79

11.2.99

# ಲೇಖಕರ ಮಾತು

ಕಲಿಯುಗದಲ್ಲಿ ಸಜ್ಜನರನ್ನು ಕಾಯಲಿಕ್ಕಾಗಿಯೇ ಏನೋ ಒಂದು ನೆಪಮಾಡಿಕೊಂಡು, ವೈಕುಂಠದಿಂದ ಭೂಲೋಕಕ್ಕೆ ಬಂದು ತಿರುಮಲೆಯಲ್ಲಿ ನೆಲೆಸಿರುವ ಮಹಾವಿಷ್ಣುವಿನ ದಿವ್ಯ ಭವ್ಯವಾದ ಲೀಲಾ ವಿನೋದವೇ ಶ್ರೀನಿವಾಸಕಲ್ಯಾಣದ ಕಥಾವಸ್ತು, ಸಪ್ತಗಿರಿಗಳ ನಡುವೆ ಸ್ವಾಮಿ ಪುಷ್ಕರಿಣೀ ತೀರದಲ್ಲಿ ನಿಂತಿರುವ ಸ್ವಾಮಿಯ ಮಹಿಮೆ ಅನಂತ, ಅಪಾರ, ಇದನ್ನು ಭವಿಷ್ಯೋತ್ತರ ಪುರಾಣ, ವರಾಹಪುರಾಣ ಮುಂತಾದುವುಗಳು ಬಹುವಾಗಿ ಸ್ತುತಿಸಿವೆ. ಅನೇಕ ಭಕ್ತರು, ಹರಿದಾಸರು, ಯತಿಗಳು ಅವನ ಈ ಲೀಲಾವಿನೋದಗಳನ್ನು ಬಲು ಭಕ್ತಿ ಪೂರ್ವಕವಾಗಿ, ರಮ್ಯವಾಗಿ ರಚಿಸಿದ್ದಾರೆ.

ಇಂತಹ ಒಂದು ಕಲ್ಯಾಣ ಮಹೋತ್ಸವವನ್ನು ನಾನು ರಚಿಸಬೇಕೆಂದು, ನನ್ನ ಅಭಿಮಾನಿಗಳು ಬಹಳ ಸಮಯದಿಂದ ನನ್ನ ಬೆನ್ನು ಹತ್ತಿದ್ದರು. ನಾನು ಈಗಾಗಲೇ 'ರುಕ್ಮಿಣೀ ವರದ'ನೆಂಬ ಕೃತಿಯಲ್ಲಿ ಶ್ರೀನಿವಾಸನ ಪರವಾಗಿ ಒಂದು ನೂರ ಎಂಟು ಕೀರ್ತನೆಗಳನ್ನು ರಚಿಸಿ ಪ್ರಕಟಿಸಿದ್ದೆ. ಆದರೆ ಗದ್ಯರೂಪದಲ್ಲಿ ಬರೆದಿರಲಿಲ್ಲ. ಸ್ವಾಮಿಯ ಪ್ರೇರಣೆಯಿಂದ ಆ ಕೆಲಸವನ್ನು ಕೈಗೆತ್ತಿಕೊಂಡು ಆಕರಗ್ರಂಥವನ್ನು ಕೈಗೆತ್ತಿಕೊಂಡು ಅವಲೋಕಿಸಿದಾಗ, ಆ ಕೆಲಸ ನಾನು ತಿಳಿದುಕೊಂಡಷ್ಟು ಸರಳವಲ್ಲ ಎನ್ನಿಸಿತು. ಏಕೆಂದರೆ ಅಪಾರ ಮಹಿಮನ ವ್ಯಾಪಾರಗಳಿಗೆ ಮೊದಲಾವುದು? ಕೊನೆಯಾವುದು? ಎಲ್ಲಿಂದ ಪ್ರಾರಂಭಿಸಬೇಕು? ಕೊನೆಗಾಣದ ಆತನ ಮಹಿಮೆಗಳನ್ನು ಹೇಗೆ ಬಣ್ಣಿಸಬೇಕು. ಭಗವಂತನೇ ದಾರಿ ತೋರಿಸಿದ.

ರಾಷ್ಟ್ರದ ಹಿರಿಯ ವಿದ್ವಾಂಸರೂ, ಲೇಖಕರೂ ಆದ ಶ್ರೀಯುತ-ಆದ್ಯರಾಮಾಚಾರ್ಯರು ಮುತುವರ್ಜಿವಹಿಸಿ, ತಿರುಮಲ ತಿರುಪತಿ ದೇವಸ್ಥಾನಗಳ ವತಿಯಿಂದ ಸಹಾಯಧನಕ್ಕೆ ಏರ್ಪಾಡುಮಾಡಿಸಿಕೊಟ್ಟಿದ್ದೇ ಅಲ್ಲದೆ ಕೃತಿಯನ್ನು ಆದ್ಯಂತವಾಗಿ ಪರಿಶೀಲಿಸಿ ಮುದ್ರಣದ ಹೊರೆಹೊತ್ತು,

ಕರಡು ಪ್ರತಿಗಳನ್ನು ತಿದ್ದುವುದನ್ನೂ ನಿರ್ವಹಿಸಿದ್ದಾರೆ. ಇವರಿಗೆ ನಾನು ಯಾವ ರೀತಿ ಋಣಿಯಾಗಿರಬೇಕೋ ತಿಳಿಯದು. ಹಾಗೆಯೇ ಮುನ್ನುಡಿಯ ಆಶೀರ್ವಚನವನ್ನೂ ನೀಡಿದ್ದಾರೆ. ಇವರ ಸ್ನೇಹಿತರಾದ ಶ್ರೀ ಗೋವಿಂದ ಮೂರ್ತಿ ದೇಸಾಯಿಯವರೂ ಸಹಾ ಆಗಾಗ ಸಲಹೆ ಸೂಚನೆಗಳನ್ನು ಕೊಟ್ಟು ದಾರಿತೋರಿದ್ದಾರೆ.

ತಿರುಪತಿ ದೇವಸ್ಥಾನದ ಮಂಡಲಿಯವರು ಈ ಕೃತಿಯನ್ನು ಒಪ್ಪಿ ಮುದ್ರಣಕ್ಕಾಗಿ ಧನಸಹಾಯ ಮಾಡಿದ್ದಾರೆ. ಅವರಿಗೆ ಅನಂತ ಧನ್ಯವಾದಗಳು.

ನನ್ನ ಎಲ್ಲಾ ಸಾಹಿತ್ಯ ರಚನೆಗೂ ಮೂಲ ಪ್ರೇರಕರಾಗಿರುವ ನನ್ನ ಮಾತೃಶ್ರೀಯವರಿಗೂ ಅನಂತಾನಂತವಂದನೆಗಳು. ಅವರು ಸಂಗ್ರಹಿಸಿರುವ ನಿತ್ಯಪಾರಾಯಣದ ಶ್ರೀನಿವಾಸ ಕಲ್ಯಾಣಗಳನ್ನು ಈ ಕೃತಿಯಲ್ಲಿ ಸೇರಿಸಿದ್ದೇನೆ.

ನನ್ನೆಲ್ಲಾ ಸಾಹಿತ್ಯವನ್ನೂ ಬಹುವಾಗಿ ಮೆಚ್ಚುವ ನನ್ನ ಗೆಳತಿ ನರ್ಮದಾ ಆನಂದ್, ಸುಶಿಲಾರಂಗನಾಥರಾವ್, ಶ್ರೀಮತಿ ದೊಡ್ಡಸುಧಾಬಾಯಿ, ಟಿ.ಡಿ ಇಂದಿರಾಬಾಯಿ ಇನ್ನೂ ಅನೇಕ ಅಭಿಮಾನಿಗಳನ್ನು ನಾನು ನೆನೆಯಲೇ ಬೇಕು.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಸತ್ಯಶ್ರೀ ಪ್ರಿಂಟರ್ಸ್‌ರವರಿಗೂ, ಸುಂದರವಾದ ಮೇಲ್ಹು ಹೊದಿಕೆಯನ್ನು ಚಿತ್ರಿಸಿಕೊಟ್ಟ ಕಲಾವಿದರಿಗೂ ನನ್ನ ನಮನಗಳು.

ಇನ್ನು ಶ್ರೀನಿವಾಸ ಪ್ರಭುವನ್ನು ನಾನು ಕೇಳಿಕೊಳ್ಳುವುದು ಇಷ್ಟೆ-

"ಬಿಡೆನೋ ನಿನ್ನಂಘ್ರಿಶ್ರೀನಿವಾಸಾ
ಎನ್ನ ದುಡಿಸಿಕೊಳ್ಳಲೋ ಶ್ರೀನಿವಾಸಾ"
ಶುಭಂ ಭವತು

3.2.99 **ರುಕ್ಮಿಣಿ ಗಿರಿಮಾಜಿ**

# ಶ್ರೀನಿವಾಸ ಕಲ್ಯಾಣ

## ವೇಂಕಟಗಿರಿ

ಪರಮ ಪವಿತ್ರವಾದ ದಕ್ಷಿಣಭಾರತದ ಎರಡೂ ಅಂಚಿನಲ್ಲಿ ಪೂರ್ವಘಟ್ಟ ಮತ್ತು ಪಶ್ಚಿಮಘಟ್ಟಗಳು ತಮ್ಮ ನಿತ್ಯ ಹರಿದ್ವರ್ಣದ ಕಾಡುಗಳಿಂದಲೂ, ನದ-ನದಿಗಳಿಂದಲೂ ಶೋಭಾಯಮಾನವಾಗಿವೆ. ಪೂರ್ವ ಘಟ್ಟಗಳಂತೂ ಅನೇಕ ಪವಿತ್ರ ತೀರ್ಥಗಳಿಂದಲೂ, ಅಪೂರ್ವವಾದ ಸಸ್ಯರಾಶಿಗಳಿಂದಲೂ, ನಾನಾ ವಿಧವಾದ ಪಕ್ಷಿ ಸಂಕುಲಗಳಿಂದಲೂ, ಆನೆಯೇ ಮೊದಲಾಗಿ ಎಲ್ಲ ಜಾತಿಯ ಮೃಗಗಳಿಂದಲೂ, ಅನೇಕ ದೇವ ಮಂದಿರಗಳಿಂದಲೂ ಕಣ್ಮನಗಳನ್ನು ತಣಿಸುತ್ತಿವೆ. ಇಂತಹ ಶ್ರೇಷ್ಠವಾದ ಭೂಭಾಗದಲ್ಲಿ ಸುವರ್ಣಮುಖರೀ ನದಿಯ ಉತ್ತರಕ್ಕೆ ಎರಡೂವರೆ ಯೋಜನ ದೂರದಲ್ಲಿ ಪರಮ ಪವಿತ್ರವಾದ ವೇಂಕಟಗಿರಿಯಿದೆ. ಇದು ಮೇರು ಪರ್ವತದ ಮಗ. ಶುಕ ಅಗಸ್ತ್ಯ ಮೊದಲಾದ ಮುನಿಗಳು ಇಲ್ಲಿ ತಪಸ್ಸು ಮಾಡಿ ಶ್ರೀ ಹರಿಯ ಪ್ರೀತಿಗೆ ಪಾತ್ರರಾಗಿದ್ದಾರೆ. ಇದು ಭೂ ವೈಕುಂಠವೆಂದು ತಿಳಿಯಲಾಗಿದೆ. ಈ ವೆಂಕಟಾದ್ರಿಯು ಆದಿಶೇಷನ ಹೆಡೆ. ಅಹೋಬಲ ಪರ್ವತವು ಆದಿಶೇಷನ ಮಧ್ಯಭಾಗ. ಶ್ರೀ ಶೈಲ ಪರ್ವತವು ಆದಿ ಶೇಷನ ಬಾಲವಾಗಿದೆ.

'ವೇಂ' ಎಂದರೆ ಪಾಪರಾಶಿ. 'ಕಟ' ಎಂದರೆ ಅದನ್ನು ಸುಡುವುದು. ಆದ್ದರಿಂದ ಅದು ವೇಂಕಟಾಚಲ. ಈ ವೇಂಕಟಾಚಲವು ಚತುರ್ಯುಗದಲ್ಲೂ ಬೇರೇ ಬೇರೆ ಹೆಸರುಗಳಿಂದ ಪ್ರಸಿದ್ಧವಾಗಿದೆ.

ಕೃತಯುಗದಲ್ಲಿ ವೃಷಭನೆಂಬ ದುಷ್ಟನಾದ ರಾಕ್ಷಸನು

ಭೂಲೋಕದಲ್ಲಾಗಲೀ, ಸತ್ಯಲೋಕದಲ್ಲಾಗಲೀ, ಯಾರೂ ಇಲ್ಲವೆಂದು ಹೇಳುತ್ತಲಿರುವೆ. ಸರಿ, ಇದನ್ನು ಕಾರ್ಯರೂಪದಲ್ಲಿ ಮಾಡಿ ತೋರಿಸು. ದೇವತೆಗಳು ನಿಮ್ಮ ಬಲಾಬಲಗಳನ್ನು ನಿರ್ಣಯಿಸಲಿ. ಇಲ್ಲಿಂದ ಉತ್ತರ ದಿಕ್ಕಿನಲ್ಲಿ ಮೇರುವಿನ ಪುತ್ರನಾದ ಆನಂದಾದ್ರಿ ಇರುವುದು. ನೀನು ಹೋಗಿ ಅದನ್ನು ಬಲವಾಗಿ ಸುತ್ತಿಕೋ. ವಾಯುವು ಅಲ್ಲಿಂದ ನಿನ್ನನ್ನು ಹೊರಡಿಸಬೇಕು. ಇದೇ ನಿಮ್ಮ ಬಲದ ಪರೀಕ್ಷೆಯೆಂದು ಅಪ್ಪಣೆಕೊಡಿಸಿದನು.

ಶೇಷದೇವನಿಗೆ ಇದೇನು ಮಹಾ ಅಗಾಧ ಎನ್ನಿಸಿ ಆನಂದಾದ್ರಿಯನ್ನು ತನ್ನ ಶರೀರದಿಂದ ಬಲವಾಗಿ ಬಂಧಿಸಿ ನಿಂತನು. ನಂತರ ವಾಯುದೇವನನ್ನು ಕರೆದನು. ವಾಯುದೇವನು ಶ್ರೀ ಮನ್ನಾರಾಯಣನಿಗೆ ಮನಸಾ ಪ್ರಣಾಮಗಳನ್ನರ್ಪಿಸಿ ಆನಂದ ಗಿರಿಯಬಳಿಗೆ ಬಂದು ತನ್ನ ಕಿರುಬೆರಳಿನಿಂದ ಆನಂದಾದ್ರಿಯನ್ನು ಹಾರಿಸಿದನು. ಆ ಕಿರು ಬೆರಳಿನ ವೇಗ ಮಾತ್ರಕ್ಕೆ ಆನಂದಾದ್ರಿಯು ಹಾರಿಹೋಗತೊಡಗಿತು. ಅದರ ಜೊತೆಗೇ ಅದನ್ನು ಬಂಧಿಸಿದ್ದ ಶೇಷದೇವನೂ ಕೂಡಾ ದಕ್ಷಿಣ ದಿಕ್ಕಿಗೆ ಹಾರಿ ಹೋಗುತ್ತಲಿದ್ದನು. ಆಗ ಮೇರು ಪರ್ವತವು ತನ್ನ ಮಗನ ದುರವಸ್ಥೆಯನ್ನು ಕಂಡು ವಾಯುದೇವನನ್ನು ದೈನ್ಯದಿಂದ ಪ್ರಾರ್ಥಿಸಿ ತನ್ನ ಮಗನನ್ನು ಉಳಿಸಿಕೊಡುವಂತೆ ಕೇಳಿಕೊಂಡನು. ಆಗ ಕನಿಕರಗೊಂಡ ವಾಯುದೇವನು ಆನಂದದಾದ್ರಿಯು ಐವತ್ತು ಯೋಜನ ಹಾರಿಹೋದನಂತರ ಸುವರ್ಣಮುಖರೀ ನದಿಯ ಉತ್ತರ ತೀರದಲ್ಲಿ ಶೇಷದೇವನಿಂದ ಸುತ್ತುವರಿದಿದ್ದ ಆ ಪರ್ವತವನ್ನು ಸ್ಥಾಪಿಸಿದನು. ಆಗ ಶೇಷದೇವನಿಗೆ ವಾಯುದೇವನ ಸಾಮರ್ಥ್ಯದ ಅರಿವಾಗಿ ಅವನನ್ನು ಸ್ತೋತ್ರ ಮಾಡತೊಡಗಿದನು. ವಾಯುದೇವನು ಸಂತುಷ್ಟನಾಗಿ ಶೇಷದೇವನನ್ನು ಮನ್ನಿಸಿದನು. ಹೀಗೆ ಶೇಷದೇವನ ಹೆಸರಿನಿಂದ ದ್ವಾಪರ ಯುಗದಲ್ಲಿ ಆ ಪರ್ವತಕ್ಕೆ ಶೇಷಾಚಲ ಅಥವಾ ಶೇಷಾದ್ರಿ' ಎಂಬ ಹೆಸರು ಬಂದಿತು.

**ವೇಂಕಟಾಚಲ**

ಕಾಳಹಸ್ತಿ ಎಂಬ ನಗರದಲ್ಲಿ ಪುರಂದರನೆಂಬ ಬ್ರಾಹ್ಮಣನು

ವಾಸಿಸುತ್ತಿದ್ದನು. ಅವನು ವೇದಶಾಸ್ತ್ರ ಪಾರಂಗತನೂ, ದೈವಭಕ್ತನೂ ಆಗಿದ್ದನು. ಆದರೆ ಅವನಿಗೆ ಮಕ್ಕಳಿರಲಿಲ್ಲ. ಭಗವಂತನ ಕೃಪೆಯಿಂದ ಅವನಿಗೆ ವೃದ್ಧಾಪ್ಯದಲ್ಲಿ ಒಂದು ಗಂಡು ಮಗುವಾಯಿತು ಅದಕ್ಕೆ ಮಾಧವನೆಂದು ಹೆಸರಿಟ್ಟನು. ಮಾಧವನಿಗೆ ಒಂದೊಂದಾಗಿ ಚೌಲ, ಅಕ್ಷರಾಭ್ಯಸ, ಅನ್ನಪ್ರಾಶನ ಮೊದಲಾದ ಸಂಸ್ಕಾರಗಳೆಲ್ಲಾ ನಡೆದು ಅವನು ಉಪನೀತನಾದನು. ನಂತರ ತಂದೆಯಂತೆ ತಾನೂ ಮಹಾಪಂಡಿತನಾದನು. ಪ್ರಾಪ್ತವಯಸ್ಕನಾಗಲು ಅವನಿಗೆ ವಿವಾಹ ಯೋಗ್ಯಯಾ, ಸತ್ಕುಲ ಪ್ರಸೂತೆ ಆದ ಚಂದ್ರಲೇಖಾ ಎಂಬ ಹೆಣ್ಣನ್ನು ತಂದು ವಿವಾಹಮಾಡಿದರು. ಮಾಧವನು ಸದಾಚಾರ ಸಂಪನ್ನನಾಗಿ ಮಾತಾ ಪಿತೃಗಳಸೇವೆಯನ್ನು ಮಾಡುತ್ತಾ ಭಗವಂತನನ್ನು ಆರಾಧಿಸಿಕೊಂಡಿದ್ದನು.

ಒಂದು ದಿನ ಮಾಧವನು ಹಾಡುಹಗಲಿನಲ್ಲೇ ತನ್ನ ಹೆಂಡತಿಯನ್ನು ಭೋಗಿಸಲಿಚ್ಛಿಸಿದನು. ಆದರೆ ಸದಾಚಾರ ಸಂಪನ್ನೆಯಾದ ಆಕೆ ಸಮ್ಮತಿಸಲಿಲ್ಲ. ಮಾಧವನು ಬಹಳ ಬಲವಂತ ಪಡಿಸಲು ಆಕೆ ಅವನಿಗೆ ಒಂದುಪಾಯವನ್ನು ಸೂಚಿಸಿ ತಾನು ನೀರನ್ನು ತರಲು ಮನೆಯಿಂದ ಹೊರಗೆ ಹೋಗುವುದಾಗಿಯೂ, ಅದೇ ವೇಳೆಯಲ್ಲಿ ಅವನು ಮನೆಯಿಂದ ಹೊರಗೆ ಬಂದರೆ ಅಲ್ಲಿ ಅವನ ಅಭಿಲಾಷೆಯನ್ನು ಪೂರೈಸುವುದಾಗಿಯೂ ಹೇಳಿದುಳು. ಮಾಧವನು ಅದರಂತೆ ಅವಳನ್ನು ಹಿಂಬಾಲಿಸಿಕೊಂಡು ವನ ಪ್ರದೇಶದಲ್ಲಿ ಹೋಗುತ್ತಿರುವಾಗ ಒಂದು ಮರದ ಕೆಳಗೆ ಮನಮೋಹಕ ಸೌಂದರ್ಯದಿಂದ ಕೂಡಿದ ಹೆಣ್ಣೊಬ್ಬಳನ್ನು ಕಂಡು ಮೋಹದಿಂದ ಪರವಶನಾಗಿ ಚಂದ್ರಲೇಖೆಯನ್ನು ಏನೇನೋ ಹೇಳಿ ಮನೆಗೆ ಕಳುಹಿಸಿಬಿಟ್ಟು ಆ ಸುಂದರಿಯ ಬಳಿಗೆ ಬಂದನು.

ಆದರೆ ಆಕೆ ಅಂತ್ಯ ಜಾತಿಯ ಸ್ತ್ರೀಯಾಗಿದ್ದಳು. ಪರಪತ್ನಿಯಾಗಿದ್ದಳು. ಮಾಧವನು ಆಕೆಗೆ ತನ್ನ ಇಚ್ಛೆಯನ್ನು ತಿಳಿಸಲು ಆಕೆ ಅದನ್ನೊಪ್ಪಲಿಲ್ಲ. ವೇದವೇದಾಂಗ ಪಾರಂಗತನಾದ ಬ್ರಾಹ್ಮಣನೊಬ್ಬನು ಹೀಗೆ ಅಂತ್ಯಜಳೂ, ಪರಸ್ತ್ರೀಯೂ ಆದ ತನ್ನ ಸಂಗವನ್ನು ಮಾಡುವುದು ತರವಲ್ಲವೆಂದು ಬಹಳ

ಬುದ್ಧಿವಾದವನ್ನು ಹೇಳಿದಳು ಆದರೆ ಅವನು ತನ್ನ ಹಟವನ್ನು ಬಿಡಲಿಲ್ಲ. ಕಡೆಗೆ ಕುಂತಳಾನಾಮಕಳಾದ ಅವಳು ಅವನನ್ನು ತನ್ನ ಕುಲಕ್ಕೆ ಸೇರಿಸಿಕೊಂಡು ಸುರಾಪಾನ ಮಾಡಿಸಿದಳು. ಮಾಂಸವನ್ನು ತಿನ್ನಿಸಿದಳು-ಹೀಗೆ ಹನ್ನೆರಡು ವರ್ಷಗಳ ಕಾಲ ಮಾಧವನು ತನ್ನ ತಾಯಿ ತಂದೆ, ಹೆಂಡತಿ, ಮನೆ-ಮಠಗಳನ್ನೆಲ್ಲಾ ಮರೆತು ಅವಳೊಡನೆ ಹಾಯಾಗಿದ್ದನು.

ಒಂದು ದಿನ ಆ ಕುಂತಲೆ ತೀರಿ ಹೋದಳು. ಮಾಧವನು ಹುಚ್ಚನಾಗಿ ದೇಶ ದೇಶ ಅಲೆಯ ತೊಡಗಿದನು. ಒಮ್ಮೆ ರಾಜರ ತಂಡವೊಂದು ವರಾಹ ಪರ್ವತವನ್ನು ಕುರಿತು ಯಾತ್ರೆ ಮಾಡುತ್ತಿತ್ತು. ಮಾಧವನು ಅವರನ್ನನುಸರಿಸಿದನು. ಅವರು ಶೇಷಾಚಲದ ಬಳಿ ಬಂದು ಕಪಿಲತೀರ್ಥದಲ್ಲಿ ಸ್ನಾನಮಾಡಿ ತಮ್ಮ ಪಿತೃಗಳಿಗೆ ಪಿಂಡಪ್ರದಾನ ಮಾಡಿದರು. ಮಾಧವನೂ ಸಹಾ ಕಪಿಲ ತೀರ್ಥದಲ್ಲಿ ಮಿಂದು ತನ್ನ ಬಳಿ ಅಕ್ಕಿ ಇಲ್ಲದುದರಿಂದ ಮರಳಿನ ಉಂಡೆಗಳನ್ನು ಮಾಡಿ ಅದನ್ನೇ ಪಿಂಡವೆಂದು ಪಿತೃಗಳಿಗೆ ಸಮರ್ಪಣೆ ಮಾಡಿದನು. ನಂತರ ಯಾತ್ರಿಕರ ತಂಡವು ಶೇಷಾಚಲವನ್ನು ಏರತೊಡಗಿದಾಗ ತಾನೂ ಏರತೊಡಗಿದನು.

ಮಾಧವನು ತನ್ನ ಕಾಲುಗಳಿಂದ ಪರ್ವತವನ್ನು ಸ್ಪರ್ಶ ಮಾಡಿದ್ದೆ ತಡ ಅವನ ಮೈ ನಡುಗಲಾರಂಭಿಸಿತು. ಹೊಟ್ಟೆಯಲ್ಲಿ ವಿಚಿತ್ರ ಸಂಕಟವಾಗಿ, ಅವನ ಹೊಟ್ಟೆಯಿಂದ ಅವನ ದುರಾಚಾರದ ಪಾಪರಾಶಿಯೆಲ್ಲ ವಮನವಾಗಿಬಿಟ್ಟಿತು. ಅದರ ದುರ್ಗಂಧ ನಭೋಮಂಡಲದ ವರೆಗೂ ವ್ಯಾಪಿಸಿ ದೇವತೆಗಳೆಲ್ಲಾ ತಮ್ಮ ವಿಮಾನಗಳಲ್ಲಿ ಬಂದು ಈ ಕೌತುಕವನ್ನು ನೋಡ ತೊಡಗಿದರು. ಶೇಷಾ ಚಲದ ಸ್ಪರ್ಶ ಮಾತ್ರದಿಂದ ತನ್ನ ಪಾಪವನ್ನೆಲ್ಲಾ ಕಳೆದುಕೊಂಡ ಮಾಧವನ ಶಿರಸ್ಸಿನಮೇಲೆ ದೇವತೆಗಳು ಹೂ ಮಳೆಗರೆದರು. ಸಾಕ್ಷಾತ ಬ್ರಹ್ಮ ದೇವನೇ ಬಂದು ಅವನನ್ನು ಹರಸಿದನು. - ವತ್ಸಾ, ಮಾಧವಾ, ನೀನು ಈಗ ನಿನ್ನ ಪಾಪಗಳನ್ನೆಲ್ಲಾ ಕಳೆದುಕೊಂಡು ಪುನೀತನಾಗಿರುವೆ. ನೀನು ಸ್ವಾಮಿಪುಷ್ಕರಿಣಿಯಲ್ಲಿ ಮಿಂದು, ವರಾಹದೇವರ ದರ್ಶನ ಪಡೆದು ನಿನ್ನ ದೇಹವನ್ನು ತ್ಯಾಗ ಮಾಡಿಬಿಡು. ಸ್ವಲ್ಪ ಕಾಲದ

ನಂತರ ಅದೇ ಸ್ಥಳದಲ್ಲಿಯೇ ನೀನು ಸುಧರ್ಮನೆಂಬ ರಾಜನಿಗೆ ಮಗನಾಗಿ ಹುಟ್ಟಿ ಆಕಾಶರಾಜನೆಂಬ ಹೆಸರಿನಿಂದ ಪ್ರಸಿದ್ಧನಾಗುತ್ತೀಯೆ. ನಿನಗೆ ಸಾಕ್ಷಾತ ಲಕ್ಷ್ಮೀದೇವಿಯೇ ಮಗಳಾಗಿ ದೊರಕುತ್ತಾಳೆ. ಪರಮಾತ್ಮನಾದ ಶ್ರೀನಿವಾಸನೇ ನಿನಗೆ ಅಳಿಯನಾಗುತ್ತಾನೆ. ಕೊನೆಯಲ್ಲಿ ನೀನು ಸಯುಜ್ಯವನ್ನು ಪಡೆಯುತ್ತೀಯೆ''.

ಮಾಧವನು ಬ್ರಹ್ಮದೇವನು ಹೇಳಿದಂತೆಯೇ, ನಡೆದು ಕೊಂಡನು. ಬ್ರಹ್ಮದೇವನೇ ಶೇಷಾಚಲಕ್ಕೆ ವೇಂಕಟಚಲವೆಂದು ನಾಮಕರಣ ಮಾಡಿದನು.

ಹೀಗೆ ಆ ಪರ್ವತಕ್ಕೆ ನಾಲ್ಕು ಯುಗಗಳಲ್ಲೂ ಕ್ರಮವಾಗಿ-ವೃಷಭಾಚಲ, ಅಂಜನಾದ್ರಿ, ಶೇಷಾಚಲ ಮತ್ತು ವೇಕಂಟಾಚಲಗಳೆಂಬ ಹೆಸರುಗಳು ಬಂದವು.

## ದೇವತೆಗಳಲ್ಲಿ ಶ್ರೇಷ್ಠನಾದವನು ಯಾರು?

ಪರಮಪವಿತ್ರವಾದ ಗಂಗಾನದಿಯ ತೀರ. ಲೋಕಪಾವನೆಯಾದ ಗಂಗೆಯು ಶಾಂತ ಗಂಭೀರವಾಗಿ ಹರಿಯುತ್ತಿದ್ದಾಳೆ. ತೀರದ ಕಾನನದಲ್ಲಿ ಕಶ್ಯಪರೇ ಮೊದಲಾದ ಅನೇಕ ಋಷಿಗಳು ಕುಳಿತು ಸತ್ರಯಾಗವನ್ನು ಆಚರಿಸುತ್ತಿದ್ದಾರೆ. ಹೋಮ ಧೂಮದಿಂದ ಪರಿಸರವೆಲ್ಲಾ ಸುಗಂಧಮಯವಾಗಿ ಕ್ರಿಮಿಕೀಟಗಳಿಲ್ಲದೆ ಶುಭ್ರವಾಗಿದೆ. ಉಚ್ಚರಿಸಲ್ಪಡುತ್ತಿರುವ ಮಂತ್ರ ಘೋಷ ಸುನಾದಯುಕ್ತವಾಗಿ, ನಭೋಮಂಡಲವನ್ನು ಮುಟ್ಟುತ್ತಲಿದೆ. ಒಂದೆಡೆ ಬ್ರಹ್ಮ ಜಿಜ್ಞಾಸೆ ನಡೆಯುತ್ತಿದೆ. ಎಲ್ಲೆಡೆ ಸಂಭ್ರಮದ ವಾತಾವರಣ.

ಸುದೂರದಲ್ಲಿ ಕರ್ಣಮಧುರವಾದ ವೀಣಾನಾದ ಕೇಳಿಬರುತ್ತಿದೆ. ಜೊತೆಗೇ ಶ್ರೀಹರಿಯ ಪರವಾದ ದಿವ್ಯಗಾಯನ. ಕಾಲ್ಗೆಜ್ಜೆಗಳ ಧ್ವನಿ. ದೇವರ್ಷಿಗಳಾದ ನಾರದರು ಯಾಗಶಾಲೆಗೆ ದಯಮಾಡಿಸಿದರು. ಋಷಿಗಳು ಎಲ್ಲ ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಆಸನದಲ್ಲಿ ಕುಳ್ಳಿರಿಸಿದರು. ಆಗ ನಾರದರು ನೆರೆದಿದ್ದ ಋಷಿಗಳನ್ನು ಕಂಡು ಪ್ರಶ್ನೆ ಮಾಡಿದರು.

ಋಷಿಗಳೇ, ಇಂತಹ ಮಹತ್ತರವಾದ ಯಜ್ಞವನ್ನು ಯಾರಿಗೋಸ್ಕರ? ಯಾವ ಫಲಭೋಗಕ್ಕಾಗಿ ಮಾಡುತ್ತಿರುವಿರಿ? ಹಾಗೆಯೇ ದೇವತೆಗಳಿಗೆಲ್ಲಾ ಶ್ರೇಷ್ಠನಾದ ಯಾರಿಗೆ ಇದರ ಫಲವನ್ನು ಅರ್ಪಿಸುತ್ತಿರುವಿರಿ?

ಋಷಿಗಳು ತಬ್ಬಿಬ್ಬಾದರು. ಬ್ರಹ್ಮಜಿಜ್ಞಾಸೆಯಲ್ಲಿ ಮಗ್ನರಾಗಿದ್ದ ಅವರು ಈ ವಿಚಾರಗಳನ್ನು ಯೋಚಿಸಿಯೇ ಇರಲಿಲ್ಲ. ಹೌದು, ದೇವತೆಗಳಲ್ಲೆಲ್ಲಾ ಶ್ರೇಷ್ಠನಾದವನು, ಸರ್ವೋತ್ತಮನಾದವನು ಯಾರೋ ಅವನಿಗೆ ಈ ಯಜ್ಞದ ಫಲ ಅರ್ಪಣೆ ಖಚಿತ. ಆದರೆ ಅವನು ಯಾರು? ಇದನ್ನು ನಿರ್ಣಯಿಸುವುದು ಹೇಗೆ? ಹೀಗೆ ಪ್ರಶ್ನೆ ಮಾಡಿಕೊಂಡು ಕೊನೆಗೆ ಬ್ರಹ್ಮ-ವಿಷ್ಣು-ಮಹೇಶ್ವರರಲ್ಲಿ ಯಾರು ಶ್ರೇಷ್ಠರೆಂಬುದನ್ನು ತಿಳಿದು ಬರಲು ಬ್ರಹ್ಮಮಾನಸ ಪುತ್ರರೂ, ಶ್ರೇಷ್ಠ ತತ್ವಜ್ಞಾನಿಗಳೂ ಆಗಿದ್ದ ಭೃಗು ಮಹರ್ಷಿಗಳನ್ನು ಪ್ರಾರ್ಥಿಸಿಕೊಂಡರು.

ಭೃಗು ಮಹರ್ಷಿಗಳು ಒಪ್ಪಿಕೊಂಡು ಮೊದಲು ಸತ್ಯಲೋಕದ ಕಡೆ ಪಯಣ ಬೆಳೆಸಿದರು.

ಅಲ್ಲಿ ಬ್ರಹ್ಮದೇವರು ತಮ್ಮ ನಾಲ್ಕೂ ಮುಖಗಳಿಂದ ವೇದಗಳನ್ನು ಮಧುರವಾಗಿ ಉಚ್ಚರಿಸುತ್ತಿದ್ದರು. ತೇಜಃ ಪುಂಜರಾದ ಅವರು ಮುವ್ವತ್ತೆರಡು ಲಕ್ಷಣಗಳಿಂದ ಕೂಡಿದ ಭವ್ಯಾಕೃತಿಯುಳ್ಳವರು. ದಿಕ್ಪಾಲಕರೆಲ್ಲಾ ಅವರನ್ನು ಸುತ್ತುವರಿದು ಶ್ರೀ ಹರಿಯನಾಮವನ್ನು ತನ್ಮಯತೆಯಿಂದ ಕೇಳುತ್ತಿದ್ದಾರೆ. ಸರ್ವನಿಯಾಮಕನಾದ, ಸರ್ವವಂದ್ಯನಾದ ಶ್ರೀ ಹರಿಯ ಸ್ತೋತ್ರದಲ್ಲಿ ಬ್ರಹ್ಮದೇವರು ಮಗ್ನರಾಗಿದ್ದಾರೆ. ಇಂತಹ ಬ್ರಹ್ಮದೇವರನ್ನು ಕಂಡು ಭೃಗು ಮುನಿಗಳು ವಿನೀತರಾಗಿ ನಮಸ್ಕರಿಸಿದರು. ಆದರೆ ಬ್ರಹ್ಮದೇವರು ಭೃಗು ಮುನಿಗಳನ್ನು ನೋಡಿದರೂ ನೋಡದಂತೆಯೇ ಕುಳಿತು ಅವರನ್ನು ಮಾತನಾಡಿಸಲೇ ಇಲ್ಲ. ಇದರಿಂದ ಭೃಗು ಋಷಿಗಳಿಗೆ ಬಹಳ ಕೋಪ ಬಂದಿತು. ತಕ್ಷಣವೇ ಅವರು ಬ್ರಹ್ಮದೇವರನ್ನು ಕುರಿತು ಮನೆಗೆ ಬಂದ ಸದ್ಬ್ರಾಹ್ಮಣನನ್ನು ಆದರಿಸದಿದ್ದ

ನಿನಗೆ ಭೂಲೋಕದಲ್ಲಿ ಪೂಜೆಯೇ ಬೇಡವೆಂದು ಹೇಳಿ ಅಲ್ಲಿಂದ ಹೊರಟು ಕೈಲಾಸ ಪರ್ವತದೆಡೆಗೆ ಹೊರಟರು.

ಕೈಲಾಸದಲ್ಲಿ ರುದ್ರದೇವರು ಪಾರ್ವತೀ ದೇವಿಯರೊಡನೆ ವಿಹರಿಸುತ್ತಿದ್ದರು. ಭೃಗುಋಷಿಯನ್ನು ಕಂಡ ಪಾರ್ವತೀ ದೇವಿಯವರು ಸಂಕೋಚಗೊಂಡು ರುದ್ರದೇವರಿಗೆ ಭೃಗುಋಷಿಗಳ ಆಗಮನವನ್ನು ತಿಳಿಸಿದರು. ಆದರೆ ರುದ್ರದೇವರಿಗೆ ತಮ್ಮ ಏಕಾಂತಕ್ಕೆ ಭಂಗತಂದ ಋಷಿಗಳ ಮೇಲೆ ಕೋಪಬಂದಿತು. ಅವರು ಭೃಗುಋಷಿಗಳನ್ನು ಸಂಹರಿಸಲು ತ್ರಿಶೂಲವನ್ನೇ ಎತ್ತಿಕೊಂಡರು. ಆಗ ಭೃಗುಋಷಿಗಳು-ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನನ್ನು ಆದರಿಸದೆ, ನಿನ್ನ ವಿಲಾಸವೇ ಹೆಚ್ಚೆಂದು ಭಾವಿಸಿದ ನಿನಗೆ ಭೂಲೋಕದಲ್ಲಿ ಪೂಜೆಯೇಬೇಡ. ನಿನಗೆ ಲಿಂಗಪೂಜೆಯೇ ನಡೆಯಲಿ ಎಂದು ಶಾಪವಿತ್ತು ವೈಕುಂಠದತ್ತ ಪಯಣಬೆಳೆಸಿದರು.

ವೈಕುಂಠವಾದರೋ ಬಹಳ ವಿಸ್ತೀರ್ಣವಾದಲೋಕ-ಭೂಲೋಕದಿಂದ ಸತ್ಯಲೋಕದವರೆಗೂ ಇದರ ವಿಸ್ತೀರ್ಣ. ಇಲ್ಲಿಗೆ ಬಂದು ಸೇರಿದ ಪುಣ್ಯ ಜೀವಿಗಳೆಲ್ಲಾ ಶ್ರೀ ಹರಿಯರೂಪಕ್ಕೆ ಸದೃಶವಾದ ರೂಪದಿಂದಿರುತ್ತಾರೆ. ಮರ-ಗಿಡಗಳೆಲ್ಲಾ, ಎಲ್ಲಾ ಋತುಗಳಲ್ಲಿಯೂ ಫಲ-ಪುಷ್ಪಗಳಿಂದ ನಿಬಿಡವಾಗಿ ಬೇಡಿದವರ ಇಷ್ಟಾರ್ಥಗಳನ್ನು ನೆರವೇರಿಸುತ್ತವೆ. ದೇವಾದಿದೇವತೆಗಳೆಲ್ಲಾ ಶ್ರೀಹರಿಯ ಗುಣಗಾನ ಮಾಡುತ್ತಿರುತ್ತಾರೆ. ಇಲ್ಲಿ ಯಾವವಿಧವಾದ ವಿಕಾರಗಳಿಗೂ ಅವಕಾಶವೇ ಇಲ್ಲ. ವೈಕುಂಠದಲ್ಲಿರುವ ಹರಿ ಮಂದಿರವನ್ನು ಮಹಾಲಕ್ಷ್ಮಿದೇವಿಯರೇ ಸ್ವತಃ ಸ್ವಚ್ಛಗೊಳಸಿ-ಛತ್ರ-ಚಾಮರ-ವ್ಯಜನ-ಪರ್ಯಂಕ ಮೊದಲಾದ ರೂಪಗಳನ್ನು ತಾವೇ ಧರಿಸಿ, ಹಗಲಿರುಳೂ ಪರಮಾತ್ಮನ ಸೇವೆ ಮಾಡುತ್ತಿರುತ್ತಾರೆ. ಸಕಲ ಭೋಗ್ಯವಸ್ತುಗಳೂ ತಾವೇ ಆಗಿ ಪರಮಾತ್ಮನನ್ನು ತೃಪ್ತಿ ಪಡಿಸುವುದರಲ್ಲಿ ಮಗ್ನರಾಗಿರುತ್ತಾರೆ.

ಇಂತಹ 'ಹರಿಮಂದಿರ'ವನ್ನು ಭೃಗು ಋಷಿಗಳು ಪ್ರವೇಶಮಾಡಿದರು. ಇಲ್ಲಿ ಶ್ರೀ ಮಹಾವಿಷ್ಣುವು ಶೇಷದೇವನ ಪರ್ಯಂಕದ ಮೇಲೆ,

ಲಕ್ಷ್ಮೀದೇವಿಯರೊಡನೆ ಮಲಗಿದ್ದನು. ಇದನ್ನು ಕಂಡಿದ್ದೇ ಭೃಗುಋಷಿಗಳಿಗೆ ವಿಕರೀತಕೋಪಬಂದಿತು. ಅವರು ಹಿಂದು-ಮುಂದುನೋಡದೆ, ಭಗವಂತನ ಎದೆಯನ್ನು ರಭಾಡಿಸಿ ಒದ್ದರು. ಆದರೆ ತಾಡಿತನಾದ ಶ್ರೀಮನ್ನಾರಾಯಣನು ತಕ್ಷಣವೇ ಎದ್ದು, ಅತ್ಯಂತವಿನಯದಿಂದ ಅವರ ಪಾದಗಳನ್ನು ಪಿಡಿದು, ಆಲಿಂಗನ ಮಾಡಿಕೊಂಡು ಹೇಳಿದನು.

"ಮುನಿಗಳೇ, ನನ್ನ ಶರೀರವು ಅತ್ಯಂತ ಕಠಿಣವಾದದ್ದು ನಾಶರಹಿತವಾದುದು. ಇದಕ್ಕೆ ಮುಪ್ಪುಸಾವುಗಳಿಲ್ಲ. ಇಂತಹ ವಜ್ರದಂತಹ ಎದೆಯನ್ನು ಒದ್ದ ತಮ್ಮ ಸೂಕ್ಷ್ಮವಾದ ಪಾದಗಳಿಗೆ ಎಷ್ಟು ನೋವಾಗಿದೆಯೋ, ಏನೋ? ಯಾವ ಕಾರಣಕ್ಕಾಗಿ ತಾವು ಇದನ್ನು ತಾಡಿಸಿದಿರಿ?" ಎಂದು ಪ್ರೇಮಪುರಸ್ಸರವಾಗಿ ಕೇಳಿ, ತಕ್ಷಣವೇ ಬಿಸಿನೀರನ್ನು ತರಿಸಿ, ಅವರ ಪಾದಗಳನ್ನು ತೊಳೆದು, ಆ ಪಾದೋದಕವನ್ನು ತಾನು ಮೊದಲು ತಲೆಯ ಮೇಲೆ ಪ್ರೋಕ್ಷಿಸಿಕೊಂಡು ನಂತರ ಎಲ್ಲರಿಗೂ ಪ್ರೋಕ್ಷಣೆ ಮಾಡಿ, ಸಕಲ ವಿಧದಿಂದ ಅವರನ್ನು ಸತ್ಕರಿಸಿದನು. ಭೃಗುಋಷಿಗಳು ಪ್ರಸನ್ನರಾಗಿ ಶ್ರೀ ಹರಿಯೇ ಬ್ರಹ್ಮ ರುದ್ರಾದಿಗಳಿಗಿಂತಲೂ ಶ್ರೇಷ್ಠನೆಂದು ತಿಳಿದು ತಾವೂ ಕೂಡಾ ಭಗವಂತನ ಗುಣಗಾನ ಮಾಡಿ ಭೂಲೋಕಕ್ಕೆ ತೆರಳಿದರು.

ನಂತರ ಸಭೆಯನ್ನು ಸೇರಿ ಶ್ರೀಹರಿಯೇ ಎಲ್ಲ ದೇವತೆಗಳಿಗಿಂತಲೂ ಶ್ರೇಷ್ಠನೆಂದು ಘಂಟಾಘೋಷವಾಗಿಸಾರಿದರು. ಆ ನಂತರ ಲಕ್ಷ್ಮೀದೇವಿಯರು, ಜೀವರುಗಳಲ್ಲಿ ಬ್ರಹ್ಮವಾಯುಗಳು, ನಂತರ ರುದ್ರರು, ಇಂದ್ರರು ಹೀಗೆ ತತ್ವನಿಶ್ಚಯವಾಗಿ ಋಷಿಗಳೆಲ್ಲರೂ ಸರ್ವೋತ್ತಮನಾದ ಶ್ರೀಹರಿಗೇ ಯಜ್ಞಫಲವನ್ನರ್ಪಿಸಿ ಕೃತಾರ್ಥರಾದರು.

## ರಮಾದೇವಿಯರು ಕೊಲ್ಲಾಪುರಕ್ಕೆ ಹೊರಟರು

### ಪ್ರಕೃತಿ ಮತ್ತು ಪುರುಷ

ಭಗವಂತನ ಆಜ್ಞಾನುಸಾರವಾಗಿ ಮೂಲ ಪ್ರಕೃತಿಯಾದ ಲಕ್ಷ್ಮೀದೇವಿಯರೇ, ಚರಾಚರಜಗತ್ತನ್ನೆಲ್ಲಾ ನಿರ್ದೇಶಿಸುವರು. ಸ್ವಯಂ

ಮಹಾವಿಷ್ಣುವೇ ಪುರುಷ. ಸೃಷ್ಟಿಕರ್ತ, ಸ್ಥಿತಿಸ್ಥಾಪಕ ಇವರಿಬ್ಬರಿಗೂ ವಿಯೋಗವೆಂಬುದೇ ಇಲ್ಲ. ಅಂಥದರಲ್ಲಿ ಲೋಕ ಮೋಹನಾರ್ಥವಾಗಿ, ಸಾಧು-ಸಜ್ಜನರ ಪಾಲನೆಗಾಗಿ ಲಕ್ಷ್ಮೀದೇವಿಯರು ಭಗವಂತನೊಡನೆ ಪ್ರೇಮ ಕಲಹವನ್ನಾಡಿದರು - 'ಜಗದ್ರಕ್ಷಕ ಸ್ವಾಮಿ, ನೀನು ನನ್ನನ್ನು ನಿನ್ನ ಎದೆಯಲ್ಲಿ ಧರಿಸಿರುವುದನ್ನು ಮರೆತೆಯಾ? ಒಬ್ಬ ಯಃಕಶ್ಚಿತನಾದ ಮಾನವನು ನನ್ನ ಆವಾಸಸ್ಥಾನವನ್ನು ತನ್ನ ಕಾಲುಗಳಿಂದ ಝಾಡಿಸಿ ಒದ್ದಾಗ ನನಗೆಷ್ಟು ನೋವಾಯಿತು? ಎಷ್ಟು ಅವಮಾನವಾಯಿತು. ನಿನ್ನ ಭಕ್ತಪರಾಧೀನತೆ ಎಂಬುದು ಇಷ್ಟು ಪರಾಕಾಷ್ಠತೆಗೆ ಹೋಯಿತೆ? ಇನ್ನು ನಾನಿಲ್ಲಿರಲಾರೆ. ಕರವೀರ ಪುರದ ಸಜ್ಜನರು ನನ್ನನ್ನು ಕರೆಯುತ್ತಿದ್ದಾರೆ. ನಾನು ಅಲ್ಲಿಗೇ ಹೋಗಿ ನೆಲೆಸುತ್ತೇನೆ. ಎಂದು ಶ್ರೀ ಹರಿಯು ಎಷ್ಟು ಸಮಾಧಾನ ಪಡಿಸಿದಾಗ್ಯೂ ವೈಕುಂಠದಲ್ಲಿರದೆ, ವೈಕುಂಠವನ್ನು ಬಿಟ್ಟು ಕರವೀರಪುರಕ್ಕೆ ಹೊರಟು ಹೋದರು. ಅಲ್ಲಿ ಸಜ್ಜನರನ್ನು ರಕ್ಷಿಸುತ್ತಾ ನೆಲೆಯಾಗಿ ನಿಂತುಬಿಟ್ಟರು.

ಪರಮಾತ್ಮನು ತನ್ನ ಅರ್ಧಾಂಗಿಯು ಹೊರಟುಹೋದ ಮೇಲೆ ನಾನು ಒಬ್ಬಂಟಿಗನಾಗಿ ಇಲ್ಲಿರಲಾರೆ. ನಾನೂ ಭೂಲೋಕವನ್ನು ಕುರಿತು ಹೊರಟುತ್ತೇನೆ ಎಂದು ವೇಕಂಟಗಿರಿಯನ್ನು ಕುರಿತು ಹೊರಟನು.

ಈ ವೇಕಂಟಗಿರಿಯು ಗಂಗಾನದಿಗೆ ಮುನ್ನೂರು ಯೋಜನದೂರದ ಸುವರ್ಣಮುಖರೀ ನದಿಯ ತೀರದಲ್ಲಿದೆ. ಇದನ್ನು ಮೇರುಪರ್ವತದ ಮಗನೆನ್ನುತ್ತಾರೆ. ಅನೇಕ ಋಷಿ ಮುನಿಗಳು ಇಲ್ಲಿ ತಪಸ್ಸನ್ನು ಮಾಡಿ ಶ್ರೀಹರಿಯಪ್ರೀತಿಯನ್ನು ಸಂಪಾದಿಸಿದ್ದಾರೆ. ಈ ಪರ್ವತವು ಶ್ರೀ ಶೈಲದವರೆಗೂ ವಿಸ್ತಾರವಾಗಿ ಹರಡಿದೆ. ಅನೇಕ ರೀತಿಯ ಗಗನ ಚುಂಬೀವೃಕ್ಷಗಳಿಂದಲೂ ನದಿಗಳಿಂದಲೂ ಕೂಡಿದೆ. ಇದು ಸಾಧಾರಣ ಕಲ್ಲು ಬಂಡೆಗಳಿಂದ ಕೂಡಿದ ಪರ್ವತ ಪ್ರದೇಶವಲ್ಲ. ಇದು ಸಾಕ್ಷಾತ್ ಶ್ರೀಮನ್ನಾರಾಯಣನ ಆವಾಸಸ್ಥಾನ. ಇಲ್ಲಿರುವ ವೃಕ್ಷಗಳು ದೇವತೆಗಳು. ಮೃಗಗಳೆಲ್ಲಾ ಋಷಿ ಮುನಿಗಳು. ಪಕ್ಷಿಗಳು ಪಿತೃದೇವತೆಗಳು.

ಬಂಡೆಕಲ್ಲುಗಳು ಯಕ್ಷ-ಕಿನ್ನರರು. ಈ ವೇಂಕಟಗಿರಿಯ ಮೇಲಿರುವ ಸ್ವಾಮಿ ಪುಷ್ಕರಿಣಿಯಲ್ಲಿ ಮೂರು ಕೋಟಿ ತೀರ್ಥಗಳ ಸನ್ನಿಧಾನವಿದೆ. ಇದು ಮಹಾ ಪುಣ್ಯಕರವಾದ ತೀರ್ಥ. ಇದರಲ್ಲಿ ಸ್ನಾನ ಮಾಡುವವರಿಗೆ ಸಕಲ ವಿಧವಾದ ಪಾಪಗಳಿಂದ ಬಿಡುಗಡೆಯುಂಟಾಗುತ್ತದೆ. ಈ ಪುಷ್ಕರಿಣಿಯಲ್ಲಿ ಶಂಖನೆಂಬರಾಕ್ಷಸುನು ಸ್ನಾನ ಮಾಡಿ ಉತ್ತಮ ಗತಿಯನ್ನು ಪಡೆದಿದ್ದಾನೆ. ನಾರಾಯಣನೆಂಬ ಬ್ರಾಹ್ಮಣನು ವಿಷ್ಣುಲೋಕವನ್ನೇ ಸೇರಿದ್ದಾನೆ.

ಈ ಪುಣ್ಯ ತೀರ್ಥದ ಪಶ್ಚಿಮದಿಕ್ಕಿನಲ್ಲಿ ಸಾಕ್ಷಾತ್ ವರಾಹದೇವರು ಭೂದೇವಿಯೊಡನೆಕೂಡಿ ಭಕ್ತರ ಇಷ್ಟಾರ್ಥಗಳನ್ನು ಪರೈಸುತ್ತಿದ್ದಾರೆ. ಇಂತಹ ಮಹಿಮೆಗಳುಳ್ಳ ಈ ಗಿರಿಗೆ ಮಹಾವಿಷ್ಣುವು ಬಂದು ತನಗೆ ವಾಸಕ್ಕೆ ಯೋಗ್ಯವಾದ ಸ್ಥಳವನ್ನು ಹುಡುಕುತ್ತಾ ಕೊನೆಗೆ ಅಲ್ಲಿ ದೊಡ್ಡದಾದ ಒಂದು ಹುತ್ತವನ್ನು ಕಂಡನು. ಅದು ಒಂದು ದೊಡ್ಡ ಹುಣಿಸೇಮರದ ಕೆಳಗಿತ್ತು. ವಾಸಿಸಲು ಪ್ರಶಸ್ತವಾಗಿತ್ತು. ಶ್ರೀ ಹರಿಯು ಅದನ್ನೇ ತನ್ನ ಆವಾಸಸ್ಥಾನವನ್ನಾಗಿ ಮಾಡಿಕೊಂಡನು.

**ಚೋಳರಾಜ**

ವೇಂಕಟಾದ್ರಿ ಹಾಗೂ ಸುತ್ತಮುತ್ತಲಿನ ಭೂಮಂಡಲಕ್ಕೆ ನಾಗಕನ್ಯೆಯೊಬ್ಬಳಲ್ಲಿ ಜನಿಸಿದ ಚೋಳರಾಜನು, ಅಧಿಪತಿಯಾಗಿದ್ದನು. ಅವನು ಬಹಳ ಧರ್ಮಾತ್ಮನಾಗಿದ್ದನು. ಅವನ ರಾಜ್ಯದಲ್ಲಿ ಸುಖ ಸಂಪತ್ತುಗಳು ನೆಲೆಸಿದ್ದವು. ಪ್ರಜರು ಕಳ್ಳಕಾಕರ ಕಾಟವಿಲ್ಲದೆ ಸುಖ ಶಾಂತಿಗಳಿಂದಿದ್ದರು. ಬ್ರಾಹ್ಮಣರು ನಿರಾತಂಕವಾಗಿ ಯಜ್ಞಯಾಗಾದಿಗಳನ್ನು ಮಾಡುತ್ತಿದ್ದರು.

ಹೀಗಿರುವಾಗ ಸ್ವಾಮಿಯು ವೇಂಕಟಗಿರಿಯಲ್ಲಿ ನೆಲೆಸಿರುವುದನ್ನರಿತು. ಭಗವಂತನ ಸೇವೆಯನ್ನು ಮಾಡಲಾಶಿಸಿ ಬ್ರಹ್ಮನು ಹಸುವಾದನು. ರುದ್ರನು ಕರುವಾದನು. ರಮಾದೇವಿಯರು ಗೊಲ್ಲತಿಯರಾದರು. ರಮಾದೇವಿಯರು ತಾವೇ ಆ ಹಸು-ಕರುಗಳನ್ನು ಹೊಡೆದುಕೊಂಡು ಬಂದು

ಅವನ್ನು ಚೋಳರಾಜನಿಗೆ ಮಾರಿದಳು. ರಾಜನ ಬಳಿ ಇದ್ದ ಸಾವಿರಾರು ಗೋವುಗಳ ಗುಂಪಿನಲ್ಲಿ ಇವೂ ಸೇರಿಕೊಂಡವು.

ಈ ಹಸುಗಳೆಲ್ಲಾ ಮೇಯಲು ವೇಂಕಟಗಿರಿಗೆ ಹೋಗುತ್ತಿದ್ದುವು. ಹಾಗಾಗಿ ಈ ಹಸು ಕರುಗಳೂ ಅವುಗಳ ಜೊತೆಯಲ್ಲಿ ತಾವೂ ಪರ್ವತಕ್ಕೆ ಹತ್ತಿ ಹೋಗಿ ಸ್ವಾಮಿಯು ಅಡಗಿದ್ದ ಹುತ್ತವನ್ನು ಕಂಡು ಹಿಡಿದು ಪ್ರತಿನಿತ್ಯವೂ ಹುತ್ತದ ಮೇಲೆ ಹಾಲನ್ನು ಕರೆದು ಬಂದು ಬಿಡುತ್ತಿದ್ದವು. ಹಿಂಡಿನಲ್ಲಿ ಸಾವಿರಾರು ಗೋವುಗಳಿದ್ದುದರಿಂದ ಗೋಪಾಲಕನಿಗೆ ಇದರ ಸುಳಿವೇ ಸಿಗಲಿಲ್ಲ, ಆದರೆ ತನ್ನೆಲ್ಲಾ ಹಾಲನ್ನೂ ಪರಮಾತ್ಮನಿಗೆ ಅಭಿಷೇಕ ಮಾಡಿ ಬಂದು ಬಿಡುತ್ತಿದ್ದುದರಿಂದ ಈ ಹಸುವು ಮನೆಯಲ್ಲಿ ಹಾಲನ್ನು ಕೊಡುತ್ತಿರಲಿಲ್ಲ. ಇದನ್ನು ರಾಜಪತ್ನಿಯು ಗಮನಿಸಿದಳು.

ನಂತರ ಅವಳು ಗೋಪಾಲಕನನ್ನು ಕರೆದುಕೇಳಿದಳು. ಆದರೆ ಆತನು ತನಗೆ ಅದೇನೂ ತಿಳಿಯದೆಂದನು. ರಾಜ ಪತ್ನಿಯು ಕೋಪೋದ್ರಿಕ್ತಳಾಗಿ ಆ ಗೊಲ್ಲನೇ ಈ ಹಸುವಿನ ಹಾಲನ್ನು ಕುಡಿಯುತ್ತಿರಬೇಕೆಂದು ಭಾವಿಸಿ ಚರ್ಮರಜ್ಜುವಿನಿಂದ ಅವನನ್ನು ಚೆನ್ನಾಗಿ ಥಳಿಸಿದಳು.

ಗೋಪಾಲನು ಕೋಪಗೊಂಡವನಾಗಿ ಈ ಹಸುವಿನ ಮರ್ಮವನ್ನು ತಿಳಿಯಬೇಕೆಂದು ಅದನ್ನೇ ಹಿಂಬಾಲಿಸಿಕೊಂಡು ಹೋದನು. ಅದು ಯಥಾಪ್ರಕಾರ ಆ ಹುತ್ತದ ಬಳಿ ಬಂದು ಹಾಲನ್ನು ಕರೆಯುತ್ತಿತ್ತು. ಗೋಪಾಲನು ಕ್ರೋಧೋನ್ಮತ್ತನಾಗಿ ತನ್ನ ಕೊಡಲಿಯಿಂದ ಆ ಹಸುವನ್ನು ಅಲ್ಲೇ ಕತ್ತರಿಸಿ ಹಾಕಿಬಿಡಬೇಕೆಂದು ಯೋಚಿಸಿ ಸಜ್ಜಾದನು.

ಶ್ರೀನಿವಾಸನಿಗೆ ಇದು ತಿಳಿಯಿತು. ತನಗಾಗಿ ಕ್ಷೀರಾಭಿಷೇಕವನ್ನು ಮಾಡುತ್ತಿದ್ದ ಹಸುವನ್ನು ಈ ಪಾಪಿ ಗೊಲ್ಲನು ಕಡಿದು ಹಾಕಿ ಬಿಡುತ್ತಾನಲ್ಲಾ ಎಂದು ಹುತ್ತದಿಂದ ತಲೆಯನ್ನು ಮೇಲೆತ್ತಿ ಹಸುವನ್ನು ಆಚೆಗೆ ತಳ್ಳಿ ಆ ಕೊಡಲಿಗೆ ತನ್ನ ತಲೆಯನ್ನು ಕೊಟ್ಟನು. ರೋಷೋನ್ಮತ್ತನಾಗಿದ್ದ ಆ ಗೋಪಾಲಕನಿಗೆ ಈ ವಿಷಯ ತಿಳಿಯಲಿಲ್ಲ. ತಾನು ಹಸುವನ್ನೇ

ಕೊಲ್ಲುತ್ತೇನೆಂದು ಭಾವಿಸಿ ಶ್ರೀನಿವಾಸ ತಲೆಯಮೇಲೆ ತನ್ನ ಕೊಡಲಿಯನ್ನಿಟ್ಟದ್ದೆ ತಡ, ತಲೆಯೊಡೆದು ಏಳು ತಾಳೆಯ ಮರಗಳಷ್ಟು ಎತ್ತರಕ್ಕೆ ರಕ್ತ ಧಾರೆ ಚಿಮ್ಮಿತು. ರಕ್ತವು ಹುತ್ತದಿಂದ ಧಾರಾಕಾರವಾಗಿ ಹರಿಯ ತೊಡಗಿತು. ಇಂತಹ ಅದ್ಭುತವನ್ನು ಕಂಡು ಗೋಪಾಲಕನು ಭಯಭ್ರಾಂತನಾಗಿ ತನ್ನ ಅಸುವನ್ನು ಅಲ್ಲೇ ನೀಗಿದನು.

ಹಸುವು ಇದನ್ನು ಕಂಡು ಶೋಕಗೊಂಡು ಬೆಟ್ಟವನ್ನಿಳಿದು ಓಡೋಡಿ ಚೋಳರಾಜನ ಸಭೆಗೆ ಬಂದು ನೆಲದ ಮೇಲೆ ಬಿದ್ದು ವಿಲಿವಿಲಿ ಒದ್ದಾಡಲಾರಂಭಿಸಿತು. ತನ್ನ ಮುಖವನ್ನು ಬೆಟ್ಟದ ಕಡೆಗೆ ಮಾಡಿ ರೋದಿಸತೊಡಗಿತು. ಚೋಳರಾಜನಿಗೆ ಏನೂ ತೋಚದೆ ತನ್ನ ಸೇವಕನನ್ನು ಕರೆದು ಹಸುವಿನ ಹಿಂದೆ ಹೋಗಿ ಅದರ ರೋದನದ ಕಾರಣವನ್ನು ತಿಳಿದು ಬಾ ಎಂದು ಕಳಿಸಿದನು. ಆ ಸೇವಕನು ಹಸುವನ್ನು ಹಿಂಬಾಲಿಸಲು ಅದು ಅವನನ್ನು ನೇರವಾಗಿ ಹುತ್ತದ ಬಳಿಗೆ ಕರೆದೊಯ್ದಿತು. ಸೇವಕನಿಗೆ ಅತ್ಯಂತ ಆಶ್ಚರ್ಯವಾಯಿತು. ರಕ್ತವು ಹುತ್ತದಿಂದ ಧಾರಾಕಾರವಾಗಿ ಚಿಮ್ಮಿಬರುತ್ತಿದೆ. ಸನಿಹದಲ್ಲೇ ಗೋಪಾಲನು ಸತ್ತುಬಿದ್ದಿದ್ದಾನೆ. ಅವನಿಗೆ ಏನೂ ತೋಚಲಿಲ್ಲ ಬಂದು ತಾನು ಕಂಡದ್ದನ್ನು ರಾಜನಿಗೆ ತಿಳಿಸಿದನು. ರಾಜನೂ ಕೂಡಾ ಈ ಆಶ್ಚರ್ಯವನ್ನು ನೋಡಲು ಬೆಟ್ಟಕ್ಕೆ ಧಾವಿಸಿ ಆ ಹುತ್ತದ ಬಳಿ ಬಂದು ನಿಂತನು. ಶ್ರೀನಿವಾಸನು ಅವನನ್ನುಕಂಡು ಹುತ್ತದಿಂದ ಎದ್ದುಬಂದು - ''ಎಲೈ ಚೋಳರಾಜನೇ, ನಾನೊಬ್ಬ ಅನಾಥ. ನನಗೆ ತಂದೆತಾಯಿಗಳಾಗಲೀ ಅಕ್ಕ ತಮ್ಮಂದಿರಾಗಲೀ ಬಂಧು ಬಳಗಗಳಾಗಲೀ ಯಾರೂಇಲ್ಲ. ಏನೋ ಈ ಗಿರಿಪ್ರದೇಶವು ಬಹಳ ಶಾಂತಮಯವಾಗಿರುವುದ ರಿಂದ ಇಲ್ಲಿ ಕೆಲವು ಕಾಲ ಒಬ್ಬಂಟಿಗನಾಗಿರಬೇಕೆಂದು ಈ ಹುತ್ತದಲ್ಲಿದ್ದೇನೆ. ಇಂತಹ ನನ್ನ ತಲೆಯನ್ನು ಗೋಪಾಲಕನು ವಿನಾಕಾರಣ ಕಡಿದುಹಾಕಿದ್ದಾನೆ, ಅಥವಾ ನೀನೇ ಅವನನ್ನು ಕಳಿಸಿದ್ದೀಯೋ? ನನಗೆ ತಲೆಯು ತಡೆದು ಕೊಳ್ಳಲಿಕ್ಕಾಗದಷ್ಟು ಬಾಧೆಯಿಂದ ನೋಯುತ್ತಿದೆ. ಈ ನೋವಿನ ಕಾರಣದಿಂದ ರಾಜ್ಯದ ಆಗು ಹೋಗುಗಳಿಗೆಲ್ಲಾ ಸ್ವಯಂ ರಾಜನೇ

ಹೊಣೆಯಾಗುತ್ತಾನಾದ್ದರಿಂದ 'ನೀನು ನನ್ನ ಶಾಪಕ್ಕೆ ಗುರಿಯಾಗುತ್ತಿದ್ದೀಯೆ. ನಿನಗೆ ಪಿಶಾಚಜನ್ಮ ಬರಲಿ ನಡೆ, ಹೋಗು ಎಂದನು.

ಈ ಶಾಪವನ್ನು ಕೇಳಿ ಚೋಳರಾಜನು ಗಡಗಡ ನಡುಗಿ ಮೂರ್ಛಿತಗೊಂಡನು. ಚೇತರಿಕೊಂಡು ಹೇಳಿದನು "ಪ್ರಭೂ, ನನಗೆ ಯಾವ ವಿಚಾರವೂ ತಿಳಿಯದು. ನಾನು ಯಾವ ತಪ್ಪನ್ನೂ ಮಾಡಿಲ್ಲ. ನಿನಗೆ ವಿರುದ್ಧವಾದ ಕೆಲಸವನ್ನು ಮಾಡಿಯೇ ಅರಿಯೆ. ನನಗೆ ಇಂತಹ ಘೋರವಾದ ಶಾಪವನ್ನು ಏಕೆ ಕೊಟ್ಟಿರುವೆ ನಾನು ನಿರಪರಾಧಿ, ನನ್ನನ್ನು ರಕ್ಷಿಸು!"

ಶ್ರೀನಿವಾಸನಿಗೆ ತನ್ನ ಭಕ್ತರಲ್ಲಿ ಬಹಳ ಅನುಕಂಪ. ದುಡುಕಿ ಶಾಪವನ್ನು ಕೊಟ್ಟುಬಿಟ್ಟೆನಲ್ಲಾ ಎಂದು ಮನಸ್ಸು ಕರಗಿತು. ನಂತರ ಚೋಳರಾಜನನ್ನು ಕುರಿತು ಹೇಳಿದನು – "ಕಂದಾ, ಸಮಾಧಾನ ಮಾಡಿಕೋ. ನೋವನ್ನು ತಾಳಲಾರದೆ ಶಾಪ ಕೊಟ್ಟುಬಿಟ್ಟೆ. ನಾನು ಸತ್ಯ ಸಂಕಲ್ಪ. ನನ್ನ ಸಂಕಲ್ಪವನ್ನು ಯಾರೂ ಅರಿಯರು ಅಥವಾ ಕೆಡಿಸರು. ನಾನು ನಿನಗೀಗ ವಿಶಾಪವನ್ನು ಕೊಡುತ್ತಿದ್ದೇನೆ. ಕಲಿಯುಗ ಮುಗಿಯುವ ತನಕ ನಿನಗೆ ಈ ದುಃಖವಿರುತ್ತದೆ. ಮುಂದೆ ಆಕಾಶರಾಜನು ಹುಟ್ಟುವನು. ಅವನ ಮಗಳಾದ ಪದ್ಮಾವತಿಯನ್ನು ನನಗೆ ಪಾಣಿಗ್ರಹಣಮಾಡಿಕೊಡುವನು. ಕನ್ಯಾದಾನದ ಕಾಲದಲ್ಲಿ ನನಗೆ ಕೆಂಪು, ವಜ್ರ ವೈಢೂರ್ಯ ಮುಂತಾದ ಅನರ್ಘ್ಯ ರತ್ನಗಳಿಂದ ಕೂಡಿದ ಬಹುಭಾರವಾದ ಭಂಗಾರದ ಕಿರೀಟವನ್ನು ಕೊಡುವನು. ಶುಕ್ರವಾರ ಸಂಜೆ ನಾನು ಅದನ್ನು ಧರಿಸುವೆನು. ಆಗ ನನ್ನ ಕಣ್ಣುಗಳಿಂದ ಆನಂದಾಶ್ರುಗಳು ಸುರಿಯುವುವು. ಆ ಆರು ಘಳಿಗೆಗಳ ಸಮಯದಲ್ಲಿ ನಿನಗೂ ಆಂದವಾಗುವುದು".

ಈ ವಿಶಾಪವನ್ನು ಕೇಳಿ ಚೋಳರಾಜನಿಗೆ ಅತೀವ ಆನಂದವುಂಟಾಯಿತು. ಅವನು ಭಗವಂತನ ಅಪ್ಪಣೆ ಪಡೆದು ಹೊರಟು ಹೋದನು.

ಇಷ್ಟು ಹೊತ್ತಿಗೆ ಶ್ರೀನಿವಾಸನಿಗೆ ತಲೆಗೆ ಬಿದ್ದ ಪೆಟ್ಟಿನಿಂದ ಅಸಾಧ್ಯ ನೋವುಂಟಾಯಿತು. ಆಗ ಆತನು ದೇವ ಗುರುವಾದ ಬೃಹಸ್ಪತಿಯನ್ನು ಸ್ಮರಿಸಿದನು. ಬೃಹಸ್ಪತಿಯು ಒಡನೆ ಬರಲು ಶ್ರೀನಿವಾಸನು ತನ್ನ ವೃತ್ತಾಂತವನ್ನೆಲ್ಲಾ ಹೇಳಿ ಘಾಯ ವಾಸಿಯಾಗಲು ಔಷಧವನ್ನು ಬೇಡಿದನು.

ದೇವಗುರುವು ಭಗವಂತನ ಈ ಲೀಲೆಯನ್ನು ಕಂಡು ಆತನಿಗೆ ಎಕ್ಕದ ಗಿಡದ ಹತ್ತಿಯನ್ನು ಅತ್ತೀಗಿಡದ ಹಾಲಿನಲ್ಲಿ ಚೆನ್ನಾಗಿ ತೋಯಿಸಿ ತಲೆಗೆ ಹಾಕುತ್ತಾ ಇದ್ದರೆ ಘಾಯಿವಾಸಿಯಾಗುವುದೆಂದು ಹೇಳಿ ಭಗವಂತನಿಗೆ ನಮಸ್ಕರಿಸಿ ಹೊರಟುಹೋದನು. ಶ್ರೀನಿವಾಸನು ಅದಂರತೆಯೇ ಮಾಡುತ್ತಿದ್ದನು.

ಹೀಗಿರಲು ಒಮ್ಮೆ ಶ್ರೀನಿವಾಸನು ಅರುಣೋದಯ ಕಾಲದಲ್ಲಿ ಹುತ್ತದಿಂದ ಹೊರಗೆ ಬಂದು ಔಷಧಿಯನ್ನು ಹುಡಿಕಿ ತರಲು ಹೋಗುತ್ತಿದ್ದಾಗ ಎದುರಿಗೆ ವರಾಹದೇವರುಸಿಕ್ಕರು. ಇಬ್ಬರಿಗೂ ಮುಖಾಮುಖಿಯಾಯಿತು. ಇಬ್ಬರೂ ಒಬ್ಬನೇ ದೈವ. ಇಬ್ಬರಿಗೂ ಸಂತೋಷದಿಂದ ಮಾತುಬಾರ ದಾಯಿತು. ಕಣ್ಣುಗಳಿಂದ ಆನಂದಬಾಷ್ಪ ಸುರಿಯಲಾರಂಭಿಸಿತು.

ನಂತರ ವರಾಹದೇವರು ಶ್ರೀನಿವಾಸನು ಈ ಭೂಲೋಕಕ್ಕೆ ಬಂದ ಕಾರಣವನ್ನು ಕೇಳಿದರು. ಶ್ರೀನಿವಾಸನು ಅವರಿಗೆ ಎಲ್ಲಾ ಸಮಾಚಾರವನ್ನು ತಿಳಿಸಿ ಲಕ್ಷ್ಮೀದೇವಿಯರು ವೈಕುಂಠವನ್ನು ಬಿಟ್ಟು ಕೊಲ್ಲಾಪುರಕ್ಕೆ ಹೊರಟು ಹೋದುದರಿಂದ ತಾನು ಇಲ್ಲಿಗೆ ಬಂದೆನೆಂದು ತಿಳಿಸಿ, ತಾನು ಇಲ್ಲಿಯೇ ವಾಸಮಾಡಲು ಇಚ್ಛಿಸಿರುವುದರಿಂದ ತನಗೊಂದು ಸ್ಥಳವನ್ನು ಹುಡುಕಿ ಕೊಡಬೇಕೆಂದು ಕೇಳಿಕೊಂಡನು. ವರಾಹದೇವರು ಆ ಸ್ಥಳಕ್ಕೆ ನೀನು ಬಾಡಿಗೆ ಕೊಡಬೇಕೆಂದು ವಿನೋದವಾಡಿದರು. ಶ್ರೀನಿವಾಸನು "ಅದಕ್ಕೇನು, ನನ್ನ ದರ್ಶನ ಮಾಡಲು ಬರುವವರು ಮೊದಲು ನಿನ್ನ ದರ್ಶನವನ್ನು ಮಾಡುತ್ತಾರೆ. ನಿನ್ನ ಪೂಜೆಯನ್ನು ಮಾಡುತ್ತಾರೆ. ಕ್ಷೀರಾಭಿಷೇಕ ಮಾಡುತ್ತಾರೆ. ನೈವೇದ್ಯ ಮಾಡುತ್ತಾರೆ. ನಿನ್ನ ತೀರ್ಥವನ್ನು, ಪ್ರಸಾದವನ್ನೂ ಪಡೆಯುತ್ತಾರೆ. ಈ ಬಾಡಿಗೆಯು ಒಪ್ಪಿಗೆಯೇ? ಎಂದು ಕೇಳಿದನು.

ವರಾಹದೇವರು ಒಪ್ಪಿಕೊಂಡು ಶ್ರೀನಿವಾಸನಿಗೆ ನೂರು ಹೆಜ್ಜೆ ಭೂಮಿಯನ್ನು ಕೊಟ್ಟು, ಸ್ವಾಮಿಯ ಸೇವೆಗಾಗಿ ಅಡುಗೆ ಮಾಡಿಹಾಕಲಿಕ್ಕಾಗಿ ಬಕುಳೆಯೆಂಬಾಕೆಯನ್ನು ನೇಮಿಸಿಕೊಟ್ಟರು ಹಾಗೂ ಶ್ರೀನಿವಾಸ ಊಟಕ್ಕಾಗಿ ಸಾಮೆ ಅಕ್ಕಿಯನ್ನೂ, ಜೇನುತುಪ್ಪವನ್ನೂ ತಂದುಕೊಡುತ್ತಿದ್ದರು. ಬಕುಳೆಯು ಬಹಳ ಭಕ್ತಿಯಿಂದ ಶ್ರೀನಿವಾಸನ ಸೇವೆಯನ್ನು ಮಾಡುತ್ತಿದ್ದಳು.

ಈ ಬಕುಳೆಯು ಹಿಂದೆ ಅಂದರೆ ದ್ವಾಪರಯುಗದಲ್ಲಿ ಶ್ರೀ ಕೃಷ್ಣನ ತಾಯಿಯಾದ ಯಶೋದೆಯಾಗಿದ್ದಳು. ನಂದ ಗೋಕುಲದಲ್ಲಿ ಶ್ರೀ ಕೃಷ್ಣನು ತನ್ನ ಬಾಲಲೀಲೆಗಳಿಂದ ನಂದಯಶೋದೆಯರ ಹಾಗೂ ಅಲ್ಲಿನ ಪ್ರಜರಿಗೆಲ್ಲಾ ಸಂತೋಷವನ್ನುಂಟು ಮಾಡುತ್ತಿದ್ದನು. ಆಮೇಲೆ ಅವನು ಮಥುರೆಗೆ ಹೊರಟು ಹೋಗಿ ಕಂಸನನ್ನು ಸಂಹಾರಮಾಡಿ, ಉಗ್ರಸೇನನಿಗೆ ಪಟ್ಟಕಟ್ಟಿ, ತನ್ನ ತಂದೆತಾಯಿಗಳಾದ ವಸುದೇವ-ದೇವಕಿ ಮತ್ತು ಅಣ್ಣ ಬಲಭದ್ರ, ತಂಗಿ ಸುಭದ್ರೆ ಹಾಗೂ ಇತರ ಯಾದವರೊಡನೆ ದುಷ್ಟರ ಸಂಹಾರ, ಶಿಷ್ಟ ಪರಿಪಾಲನೆ ಮಾಡುತ್ತಲಿದ್ದನು. ಅವನ ವಿವಾಹಾದಿ ಕಾರ್ಯಗಳು ನಡೆದವು.

ಯಶೋದೆ ಇದ್ಯಾವುದನ್ನೂ ನೋಡಲಿಲ್ಲ. ಒಮ್ಮೆ ಈ ವಿಚಾರವನ್ನು ತಿಳಿಸಲು ಸ್ವಾಮಿಯು ಮುಂದೆ ವೇಂಕಟಗಿರಿಯಲ್ಲಿ ಅವಳ ಅಪೇಕ್ಷೆ ತೀರಿಸುವುದಾಗಿ ಹೇಳಿದ್ದನು. ಅವಳೇ ಇಲ್ಲಿ ಬಕುಳೆಯಾಗಿ ಹುಟ್ಟಿದ್ದಳು. ಭಗವಂತನ ಸೇವೆಯಲ್ಲಿ ತೊಡಗಿದಳು.

# ಶ್ರೀನಿವಾಸನ ಮೃಗಯಾವಿಹಾರ

ಒಂದು ದಿನ ಶ್ರೀನಿವಾಸನು ಬೇಟೆಯಾಡಬೇಕೆಂದು ನಿರ್ಧರಿಸಿ ವಾಯುದೇವರನ್ನು ಸ್ಮರಿಸಿದನು. ಒಡನೆಯೇ ವಾಯುದೇವರು ಕುದುರೆಯ ರೂಪಧರಿಸಿ ಬಂದರು. ನಿತ್ಯಾ ವಿಯೋಗಿನಿಯಾದ ಲಕ್ಷ್ಮಿಯು ಕುದುರೆಗೆ ಕಡಿವಾಣವಾದಳು, ಶ್ರೀನಿವಾಸನು ಬೇಟೆಗೆ ಹೊರಡಲು ಅಲಂಕಾರ ಮಾಡಿಕೊಳ್ಳ ತೊಡಗಿದನು – ಹದಿನೈದು ಮೊಳದ ಪೀತಾಂಬರವನ್ನುಟ್ಟನು. ಐದು ಮೊಳದ ಉತ್ತರೀಯವನ್ನುಹೊದ್ದನು. ತನ್ನ ಕಪ್ಪಾದ ಗುಂಗುರ ಕೂದಲನ್ನು ಚೆನ್ನಾಗಿ ಬಾಚಿಕೊಂಡನು. ಹಣೆಯಲ್ಲಿ ಮೃಗನಾಭೀತಿಲುಕ ಶೋಭಿಸುತ್ತಿತ್ತು. ಕಿವಿಯಲ್ಲಿ ಕರ್ಣಕುಂಡಲಗಳು, ಕಂಠದಲ್ಲಿ ಎಳೆತುಳಸಿಯ ವನಮಾಲೆಯಿತ್ತು. ಬಂಗಾರದ ಯಜ್ಞೋಪವೀತ ಕೈಯಲ್ಲಿ ಬಂಗಾರದ ಬಳೆಗಳು, ಬೆರಳುಗಳಲ್ಲಿ ವಜ್ರದುಂಗುರಗಳು. ಬಾಹುಗಳಲ್ಲಿ ಭುಜಕೀರ್ತಿಗಳಿದ್ದುವು. ಕುಂಕುಮ ಕೇಸರಿ ಮುಂತಾದ ವಾಸನಾದ್ರವ್ಯಗಳನ್ನು ಮೈಗೆ ಲೇಪಿಸಿಕೊಂಡಿದ್ದನು. ಚಿನ್ನದ ಪಾದುಕೆಗಳನ್ನು ಧರಿಸಿದ್ದದೇವನು ಭಕ್ತ ಜನರ ಉದ್ಧಾರಕ್ಕಾಗಿಯೇ ಈ ಗಿರಿಯಲ್ಲಿ ನಿಂದಸ್ವಾಮಿಯು ಬೇಟೆಯಾಡಲಿಚ್ಛಿಸಿ ಬೆಟ್ಟದಿಂದ ಇಳಿದು ಬಂದನು.

ಹೀಗೆ ಬೆಟ್ಟದಿಂದಿಳಿದು ಬಂದು ತನ್ನ ಶಸ್ತ್ರಗಳಿಂದ ಆನೆ, ಹುಲಿ, ಶರಭ ಮುಂತಾದವುಗಳನ್ನು ಭೇಟೆಯಾಡಿ ಬರತ್ತಿರಲು ಎದುರಿಗೊಂದು ಮದಗಜವು ಬಂದಿತು. ಅದರ ಬೆನ್ನಟ್ಟಿ ಹೋಗಲು ಅದು ಪ್ರಾಣಭಯದಿಂದ ಓಡತೊಡಗಿತು. ಬಹುದೂರ ಸ್ವಾಮಿ ಅದನ್ನು ಅಟ್ಟಿಸಿಕೊಂಡು ಹೋಗಲು ಅದು ಸೋತು ಹೋಗಿ ಭಗವಂತನಿಗೆ ಶರಣಾಗತವಾಯಿತು ಕರುಣಾಳುವಾದ ಶ್ರೀನಿವಾಸನು ಆನೆಗೆ ಅಭಯವನ್ನು ಕೊಟ್ಟು ಮುಂದೆ ಹೋಗುತ್ತಿರಲು ಅಲ್ಲಿ

ಒಂದು ಪೊದೆಯಲ್ಲಿ ಭಯದಿಂದ ಮರೆಸಿಕೊಂಡಿದ್ದ ಕೆಲವು ಕನ್ಯಾಮಣಿಗಳನ್ನು ನೋಡಿದನು. ಅವರು ಆಕಾಶರಾಜನ ಸಖಿಯರು. ಮಗಳಾದ ಪದ್ಮಾವತಿ ಮತ್ತು ಅವಳ ಸಖಿಯರು.

**ಪದ್ಮಾವತಿ**

ತ್ರೇತಾ ಯುಗದಲ್ಲಿ ಶ್ರೀರಾಮನು ಶಿವಧನುಸ್ಸನ್ನು ಭೇದಿಸಿ ಜನಕರಾಜನ ಮಗಳಾದ ಸೀತಾದೇವಿಯನ್ನು ವಿವಾಹವಾಗಿದ್ದನು. ತಂದೆಯ ಆಜ್ಞೆಯಂತೆ ಹದಿನಾಲ್ಕು ವರ್ಷ ವನವಾಸಕ್ಕೆ ಹೋಗುವಾಗ, ಸೀತಾ ಲಕ್ಷ್ಮಣರೂ ಕೂಡಾ ಅವನ ಜೊತೆಯಲ್ಲೇ ಹೊರಟರು.

ಹೀಗೆ ಶ್ರೀರಾಮನು ಜನಸ್ಥಾನದಲ್ಲಿ ವಾಸಮಾಡಿಕೊಂಡಿದ್ದು ಖರದೂಷಣ ಮೊದಲಾದ ರಾಕ್ಷಸರನ್ನು ಸಂಹಾರ ಮಾಡಿದನು. ಇದರಿಂದ ರಾವಣನಿಗೆ ಬಹಳ ಸಿಟ್ಟು ಬಂದಿತು. ಅವನು ಮಾರೀಚನನ್ನು ಕಳುಹಿಸಿದನು. ಮಾರೀಚನು ಸ್ವರ್ಣ ಮೃಗದ ವೇಷದಲ್ಲಿ ಸೀತಾರಾಮರು ವಾಸಿಸುತ್ತಿದ್ದ ಕುಟೀರದ ಬಳಿ ಬಂದನು. ಅದನ್ನು ನೋಡಿ ಸೀತೆಯು ಆ ಮೃಗವನ್ನು ತನಗೆ ತಂದುಕೊಡು ಎಂದು ಶ್ರೀರಾಮನನ್ನು ಬೇಡಿಕೊಂಡಳು. ಶ್ರೀರಾಮನು ಅದನ್ನು ಹಿಂಬಾಲಿಸಿ ಕೊಂಡು ಹೋದನು. ಆ ಮೃಗವಾದರೋರಾಮನನ್ನು ಬಹಳ ದೂರಕರೆದೊಯ್ದಿತು. ರಾಮನು ಅದಕ್ಕೆ ಬಾಣವನ್ನು ಬಿಡಲು ಅದು ತಾನು ಸಾಯುವಾಗ, ಶ್ರೀರಾಮನ ಧ್ವನಿಯನ್ನು ಅನುಸರಿಸಿ ''ಹಾ ಸೀತೆ, ಹಾ ಲಕ್ಷ್ಮಣಾ'' ಎಂದು ಕೂಗಿ ಕೊಂಡಿತು. ಲಕ್ಷ್ಮಣನು ''ಇದು ರಾಕ್ಷಸರ ಮಾಯೆ'' ಎಂದು ಎಷ್ಟು ವಿಧವಾಗಿ ಹೇಲಿದರೂ ಕೇಳದೆ ನಾನಾ ರೀತಿಯಿಂದ ಲಕ್ಷ್ಮಣನು ''ಇದು ರಾಕ್ಷಸರ ಮಾಯೆ'' ಎಂದು ಎಷ್ಟು ವಿಧವಾಗಿ ಹೇಳಿದರೂ ಕೇಳದೆ ನಾನಾ ರೀತಿಯಿಂದ ಲಕ್ಷ್ಮಣನನ್ನು ಹೀಯಾಳಿಸಿ, ಅವನು ಶ್ರೀರಾಮನನ್ನು ಹುಡುಕಿ ಕೊಂಡು ಬರಲು ಬಲಾತ್ಕರಿಸಿದಳು.

ಇತ್ತ ಲಕ್ಷ್ಮಣನೂ ಕೂಡಾ ಕುಟೀರದಲ್ಲಿ ಇಲ್ಲದಿರುವ ಅವಕಾಶವನ್ನು ಪಡೆದು ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೋದನು.

ಸೀತೆಯು ಶ್ರೀರಾಮನ ಹೆಸರನ್ನು ಉಚ್ಚರಿಸುತ್ತಾ ರೋದಿಸುತ್ತಿರಲು ಅಗ್ನಿದೇವನು ಬಂದು-ಎಲೈ ರಾವಣಾ, ನೀನು ಸೀತಾದೇವಿಯೆಂದು ತಿಳಿದು ಕೊಂಡಿರುವ ಈಕೆ ನಿಜವಾದ ಸೀತೆಯಲ್ಲ. ನಿಜವಾದ ಸೀತೆ ನನ್ನ ಬಳಿ ಇದ್ದಾಳೆ. ನಾನು ಅವಳನ್ನು ನಿನಗೆ ತಂದುಕೊಡುತ್ತೇನೆಂದು ಹೇಳಿ ಸೀತಾಮಾತೆಯನ್ನು ತನ್ನೊಡನೆ ಕರೆದುಕೊಂಡು ಹೋಗಿ ತನ್ನ ಪತ್ನಿಯಾದ ಸ್ವಾಹಾದೇವಿಯ ಬಳಿ ಅವಳನ್ನು ಬಿಟ್ಟು, ವೇದವತಿಯನ್ನು ತಂದು ರಾವಣನಿಗೊಪ್ಪಿಸಿದನು. ಹೀಗೆ ರಾವಣನ ಬಳಿ ಇದ್ದವಳು ಸೀತಾದೇವಿಯಂತೆಯೇ ಇದ್ದುದರಿಂದ ರಾವಣನು ಅವಳನ್ನು ಲಂಕೆಗೆ ಕರೆದೊಯ್ದು ಅವಳನ್ನು ಅಶೋಕವನದಲ್ಲಿಟ್ಟನು.

ಮುಂದೆ ಶ್ರೀರಾಮಲಕ್ಷ್ಮಣರು ತಮ್ಮ ಕುಟೀರಕ್ಕೆ ಬಂದಾಗ ಕುಟೀರ ಬರಿದಾಗಿತ್ತು. ರಾಮನು ಸೀತೆಯನ್ನು ಕಾಣದೆ ಪರಿಪರಿಯಾಗಿ ಶೋಕಿಸುತ್ತಾ, ಅವಳನ್ನು ಅರಸುತ್ತಾ ಋಷ್ಯಮೂಕ ಪರ್ವತದ ಬಳಿ ಬಂದಾಗ ಅವನಿಗೆ ಹನುಮಂತ-ಸುಗ್ರೀವಾದಿ ಕಪಿಗಳು ಸ್ನೇಹಿತರಾದರು. ಆಗ ರಾಮನು ಸುಗ್ರೀವನ ಅಣ್ಣನಾದ ವಾಲಿಯನ್ನು ಸಂಹರಿಸಿ ಅವನ ಬಳಿ ಇದ್ದ ಸುಗ್ರೀವನ ಪತ್ನಿಯನ್ನು ಸುಗ್ರೀವನು ಪುನಃ ಪಡೆಯುವಂತೆ ಮಾಡಿದನು. ಇದರಿಂದ ಸಂತುಷ್ಟನಾದ ಸುಗ್ರೀವನು ತನ್ನ ಕಪಿಸೈನ್ಯದಿಂದ ರಾವಣನನ್ನು ಗೆಲ್ಲುತ್ತೇನೆಂದು ರಾಮನಿಗೆ ಸಹಾಯಕನಾದನು. ನಂತರ ಹನುಮಂತನು ಸಾಗರವನ್ನು ದಾಟಿ, ಅಶೋಕವನದಲ್ಲಿದ್ದ ಮಾಯಾಸೀತೆಗೆ ಶ್ರೀರಾಮನ ಮುದ್ರೆಯುಂಗರವನ್ನು ಒಪ್ಪಿಸಿ ಅವಳ ಚೂಡಾಮಣಿಯನ್ನು ತಂದುಕೊಟ್ಟು ಶ್ರೀರಾಮನಿಗೆ ಅವಳ ಸಮಾಚಾರವನ್ನೆಲ್ಲಾ ಹೇಳಿದನು.

ಕಪಿಸೈನ್ಯವು ದಕ್ಷಿಣ ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಿ ರಾಮಲಕ್ಷ್ಮಣರೊಡನೆ ಲಂಕೆಯನ್ನು ಪ್ರವೇಶಿಸಿ ರಾವಣನೊಡನೆ ಘೋರಯುದ್ಧವನ್ನು ಮಾಡತೊಡಗಿತು. ಶ್ರೀರಾಮನು ರಾವಣನನ್ನು ಕೊಂದು ಇತರ ರಾಕ್ಷಸರನ್ನು ಹತಮಾಡಿದನು. ರಾವಣನ ತಮ್ಮನಾದ ವಿಭೀಷಣನು ರಾಮನಿಗೆ ಶರಣಾಗಲು ಅವನಿಗೆ ಪಟ್ಟಕಟ್ಟಿ ಲಂಕಾಧಿಪತ್ಯವನ್ನು

ಅವನಿಗೊಪ್ಪಿಸಿದನು. ಕಪಿಸೈನ್ಯವು ಲಂಕೆಯನ್ನು ನಾಶಮಾಡಿತು. ಸೀತೆಯು ರಾಮನ ಬಳಿ ಬಂದಳು. ಶ್ರೀರಾಮನು ಲೋಕ ವಿಡಂಬನೆಗಾಗಿ ಅಗ್ನಿ ಪ್ರವೇಶ ಮಾಡುವಂತೆ ಹೇಳಿದನು. ಸೀತೆಯು ಅಗ್ನಿ ಪ್ರವೇಶಮಾಡಲು ಅಗ್ನಿಯು ಲಕ್ಷ್ಮೀಸ್ವರೂಪಳಾದ ಸೀತೆಯುನ್ನು, ಶ್ರೀರಾಮನ ಬಳಿಗೆ ಕರೆದುಕೊಂಡುಬಂದಾಗ ಅವನ ಜೊತೆಯಲ್ಲಿ ಇಬ್ಬರು ಸೀತೆಯರಿದ್ದರು. ನಿಜವಾದ ಸೀತೆಯು ರಾಮನಿಗೆ ಆ ಇನ್ನೊಬ್ಬ ಸೀತಾಕೃತಿಯ ವಿವರಗಳನ್ನು ತಿಳಿಸಿ, ಅವಳು ಬ್ರಾಹ್ಮಣ ಕನ್ಯೆಯಾದ ವೇದವತಿಯೆಂತಲೂ, ಬಹುಕಾಲ ಶ್ರೀರಾಮನನ್ನೇ ಪತಿಯಾಗಿ ಪಡೆಯಬೇಕೆಂದು ಬಹಳ ಉಗ್ರವಾಗಿ ತಪಸ್ಸು ಮಾಡುತ್ತಿರುವಾಗ ರಾವಣನು ಅವಳ ರೂಪ-ಲಾವಣ್ಯಗಳನ್ನು ಕಂಡು, ತನ್ನನ್ನು ವಿವಾಹವಾಗಬೇಕೆಂದು ಬಲಾತ್ಕಾರಮಾಡಿದಾಗ ಆಕೆಯು ರಾವಣನಿಗೆ ಮುಂದೆ ನನ್ನ ಕಾರಣದಿಂದಲೇ ನಿನಗೆ ಮೃತ್ಯುವುಂಟಾಗುವುದೆಂದು ಶಪಿಸಿ ಅಗ್ನಿ ಪ್ರವೇಶ ಮಾಡಿದಳು. ಸಮಯುವನ್ನು ನಿರೀಕ್ಷಣ ಮಾಡಿಕೊಂಡಿದ್ದಳು, ಎಂದು ಹೇಳಿ - ''ಸ್ವಾಮಿ, ನನಗಾಗಿ ಇವಳು ಲಂಕೆಯಲ್ಲಿ ಬಹಳ ಕಷ್ಟಪಟ್ಟಿದ್ದಾಳೆ. ಈಕೆಯನ್ನು ವಿವಾಹವಾಗು ಎಂದು ಪ್ರಾರ್ಥಿಸಲು ಶ್ರೀರಾಮನು ''ನಾನು ಈಗ ಏಕ ಪತ್ನೀ ವ್ರತಸ್ಥನಾಗಿರುವುದರಿಂದ ಇವಳನ್ನು ಈಗ ವಿವಾಹವಾಗಲಾರೆ, ಮುಂದೆ ದ್ವಾಪರಾಂತ್ಯದ ಇಪ್ಪತ್ತೆಂಟನೇ ಕಲಿಯುಗದಲ್ಲಿ ಇವಳನ್ನು ವರಿಸುತ್ತೇನೆ'' ಎಂದನು.

ಆ ವೇದವತಿಯೇ ಈಗ ಪದ್ಮಾವತಿಯಾಗಿ ಆಕಾಶರಾಜನಿಗೆ ದೊರಕಿದ್ದಳು. ಅವಳನ್ನು ಆಕಾಶರಾಜನೂ ಧರಣಿ ದೇವಿಯೂ ಬಹಳ ಪ್ರೇಮದಿಂದ ಸಾಕಿದರು. ಅವಳು ಮನೆಗೆ ಬಂದ ಸ್ವಲ್ಪ ಕಾಲದಲ್ಲೇ ಪುತ್ರ ಹೀನನಾಗಿದ್ದ ಆಕಾಶರಾಜನ ಪತ್ನಿಯು ಗರ್ಭಧರಿಸಿ ಪುತ್ರನನ್ನು ಪಡೆದಳು.

ಹೀಗೆ ಪದ್ಮಾವತಿಯು ಆಕಾಶರಾಜನ ಅರಮನೆಯಲ್ಲಿ ಬೆಳೆಯುತ್ತಾ ಈಗ ವಿವಾಹಯೋಗ್ಯಳಾಗಿದ್ದಳು. ಅಂದು ತನ್ನ ಸಖಿಯರೊಡಗೂಡಿ ವಿಹಾರ ಮಾಡುತ್ತಾ ಕಾಡಿನೊಳಗೆ ಬಂದಿದ್ದಳು.

**ದೇವ ಋಷಿಗಳ ಆಗಮನ**

ಪದ್ಮಾವತಿಯು ತನ್ನ ಸಖಿಯರೊಡಗೂಡಿ ರುದ್ರರಮಣೀಯವಾದ ಆ ಕಾಡಿನಲ್ಲಿ ನಾನಾ ವಿಧವಾದ ಗಿಡ-ಮರಗಳನ್ನೂ, ಪುಷ್ಪಭರಿತವಾದ ಬಳ್ಳಿಗಳನ್ನು ನೋಡಿ ಆನಂದಿಸುತ್ತಾ, ಬಗೆ ಬಗೆಯ ಪಕ್ಷಿಸಂಕುಲವನ್ನೂ, ತೊರೆಗಳನ್ನೂ, ಪಟಾಕಿ ತವಕಗಳನ್ನೂ ನೋಡುತ್ತಾ, ಜಿಂಕೆ-ಸಾರಂಗ ಮುಂತಾದ ಮೃಗಗಳನ್ನೂ ನೋಡಿ ಆನಂದಿಸುತ್ತಾ, ತಮ್ಮ ಕಲರವದಿಂದ ಕಾಡನ್ನು ಬೆರಗುಪಡಿಸುತ್ತಾ ಬರುತ್ತಿದ್ದಳು.

ಅನತಿದೂರದಲ್ಲಿ ವೀಣೆಯ ಮಧುರ ಸುಸ್ವರದೊಂದಿಗೆ ನಾರಾಯಣನ ನಾಮವು ಕೇಳಿ ಬರಲು, ಬರುತ್ತಿರುವವರು ನಾರದ ಮುನಿಗಳೆಂದು ತಿಳಿದು ಅವರನ್ನು ಎದುರುಗೊಂಡು, ಎಲ್ಲರೂ ಭಕ್ತಿ ಭಾವದಿಂದ ಅವರಿಗೆಯರಗಿದರು.

ನಾರದರು ಅವರೆಲ್ಲರನ್ನೂ ಆಶೀರ್ವದಿಸಿ, ಪದ್ಮಾವತಿಯನ್ನು ಕುರಿತು "ಅಮ್ಮಾ, ನಾನು ನಿಮ್ಮ ಕುಲಗುರುವು. ನಿಮ್ಮ ತಂದೆಗೆ ಸಮಾನನಾದವನು. ನಾನು ನಿನ್ನ ಕೈಯನ್ನು ನೋಡಿ ನಿನ್ನ ಭವಿಷ್ಯವನ್ನು ಹೇಳುತ್ತೇನೆ. ಸಂಕೋಚ ಪಡದೆ ನಿನ್ನ ಕೈಯನ್ನು ತೋರಿಸು" ಎಂದರು.

ನಾರದರು ಆಕೆಯ ಕೈಯನ್ನು ನೋಡಿ ಬೆರೆಗಾದರು-ನುಡಿದರು- ಅಮ್ಮಾ, ನೀನು ತುಂಬಾ ಭಾಗ್ಯವಂತಳು. ಸಾಕ್ಷಾತ್ ಲಕ್ಷ್ಮೀ ಪತಿಯನ್ನೇ ಗಂಡನಾಗಿ ಪಡೆಯುವ ಭಾಗ್ಯಶಾಲಿ-ಶುಭಲಕ್ಷಣವಂತೆ - ನಿನ್ನ ಕೈಗಳು ಪದ್ಮದ ಎಲೆಗಳಂತೆ ಸುಕೋಮಲವಾಗಿವೆ. ನಿನ್ನ ಕಾಲುಗಳಲ್ಲಿ ಸ್ವಸ್ತಿಕದ ಚಿಹ್ನೆಯಿದೆ. ಮುಖವು ಚಂದ್ರನಂತೆ ಕಾಂತಿಯುಕ್ತವಾಗಿದೆ. ನಿನ್ನ ಕಣ್ಣುಗಳು ಕಮಲದ ಹೂವಿನಂತೆ ಸುಂದರವಾಗಿಯೂ ವಿಶಾಲವಾಗಿಯೂ ಇವೆ. ನಾಸಿಕವು ಎಳ್ಳಿನ ಹೂವಿನಂತಿದೆ. ಕೆನ್ನೆಗಳು ಕನ್ನಡಿಯಂತೆ ನಣುಪಾಗಿವೆ. ಹುಬ್ಬುಗಳು ಕಾಮನಬಿಲ್ಲನ್ನು ಅಣಕಿಸುತ್ತಿವೆ. ಹಲ್ಲುಗಳು ದಾಡಿಮ ಬೀಜದಂತೆ ಒಂದೇ ಸಮನಾಗಿಯೂ ಪ್ರಕಾಶಮಾನವಾಗಿಯೂ ಇವೆ. ತುಟಿಯು ಪದ್ಮರಾಗದಂತೆ ಕೆಂಪಾಗಿವೆ. ನಾಲಿಗೆಯು ಮೃದುವಾಗಿದೆ. ನಿನ್ನ

ಹೆರಳು ಕಪ್ಪಾಗಿ ನೀಳವಾಗಿದೆ. ಮುಂಗುರುಗಳು ಗುಂಗುರು ಗುಂಗುರಾಗಿ ಹಣೆಯ ಮೇಲೆ ಆಡುತ್ತಿವೆ. ಹಣೆಯು ರತ್ನ ಪೀಠದಂತೆ ಹೊಳೆಯುತ್ತಿದೆ. ಕಿವಿಗಳು ಮಾಟವಾಗಿವೆ. ನಿನ್ನ ಶರೀರವು ಲಾವಣ್ಯಮಯವಾಗಿ, ಮೋಹಕವಾಗಿದೆ. ಕಂಠವು ಶಂಖದಂತಿದೆ. ಕುಂಭ ಕುಚಗಳು ಮಾಟವಾಗಿವೆ. ಉದರವು ಬಾಳೆ ಎಲೆಯಂತೆ ತೆಳುವಾಗಿದೆ. ನಾಭಿಯು ಆಳವಾಗಿದೆ, ನಿನ್ನ ಸೊಂಟವು ಸಿಂಹದ ಸೊಂಟದಂತೆ ಕಿರಿದಾಗಿದೆ. ತೊಡೆಗಳು ಬಾಳೆಯ ದಿಂಡಿನಂತಿವೆ. ನಿನ್ನ ನಡಿಗೆಯು ಮದಗಜದಂತೆ ಗಂಭೀರವಾಗಿದೆ. ನೀನು ಬಹಳ ಪುಣ್ಯಶಾಲಿ, ನಿನ್ನ ಮಂಗಳ ಕಟಾಕ್ಷವು ಭಕ್ತರನ್ನು ಸದಾ ಸಲಹಲಿ. ನಿನಗೆ ಶ್ರೀ ಪತಿಯೇ ಪತಿಯಾಗುವನು'' ಎಂದು ಹೇಳಿ ತಾವು ಶೇಷಾಚಲಕ್ಕೆ ಪ್ರಯಾಣ ಬೆಳೆಸಿದರು. ಪದ್ಮಾವತಿಯೂ, ಅವಳ ಸಖಿಯರೂ ಬೆರಗಾಗಿ ನೋಡುತ್ತಲೇ ಇದ್ದರು.

# ಶ್ರೀನಿವಾಸ-ಪದ್ಮಾವತಿಯರ ಸಮಾಗಮ

ಶ್ರೀನಿವಾಸನು ಶಿಕಾರರೂಪದಿಂದ ಕಾಡಿಗೆ ಬೇಟೆಗಾಗಿ ನಾರಾಯಣಪುರದ ಬಳಿ ಬಂದನು. ಒಂದು ಗಂಡಾನೆಯು ಶ್ರೀನಿವಾಸನನ್ನು ಎದುರಿಸಲಾಗದೆ ಹೆದರಿ ಓಡಿತು. ಶ್ರೀನಿವಾಸನು ಅದನ್ನು ಬೆನ್ನಟ್ಟಿ ಹೋಗುತ್ತಿದ್ದನು. ಕೊನೆಗೆ ಆನೆಯು ಯಾವುದೇ ರೀತಿಯಿಂದಲೂ ತಪ್ಪಿಸಿಕೊಳ್ಳಲಾಗದೆ ಪ್ರಭುವಿಗೆ ಶರಣಾಯಿತು. ಶರಣಜನರನ್ನು ಸಲಹುವ ಶ್ರೀ ಹರಿಯು ಆನೆಯನ್ನು ಕೊಲ್ಲದೆ ಮುಂದೆ ನಡೆದನು.

ಇದೇ ಸಮಯಕ್ಕೆ ಪದ್ಮಾವತಿಯೂ ಆಕೆಯ ಸಖಿಯರೂ ಪುಷ್ಪಚಯನಕ್ಕಾಗಿ ಆ ಪ್ರದೇಶಕ್ಕೆ ಬಂದರು. ಅವರು ಕಾಡಿನ ಮೃಗಗಳು ಹೆದರಿ ಓಡಿ ಹೋಗುತ್ತಿರುವುದನ್ನೂ, ಆನೆಯ ಘೀಂಕಾರವನ್ನೂ ಕೇಳಿ ಮರಗಳ ಹಿಂದೆ ಬಚ್ಚಿಟ್ಟುಕೊಂಡರು. ಸ್ವಲ್ಪ ಸಮಯದಲ್ಲೇ ಆ ಗಂಡಾನೆಯು ಮರೆಯಾಗಿ, ಕುದುರೆಯ ಮೇಲೆ ಕುಳಿತ ಮನ್ಮಥನಿಗೂ ಮನ್ಮಥನಾದ ಒಬ್ಬ ದಿವ್ಯ ಸುಂದರನಾದ, ಕಿರಾತರೂಪೀ ಪುರುಷನನ್ನು ಕಂಡರು.

ಅವನಾದರೋ ನಿಷ್ಕಳಂಕ ಚಂದ್ರನಂತೆ ಸ್ಫುದ್ರೂಪಿಯಾಗಿದ್ದನು. ದಿವ್ಯ ಪೀತಾಂಬರವನ್ನು ಧರಿಸಿದ್ದನು. ಹೊಳೆಯುವ ಮಿಂಚಿನಂತೆ, ಶರತ್ಕಾಲದ ಮೇಘದಂತೆ ಎತ್ತರವಾಗಿದ್ದನು. ಅವನ ನಯನಗಳು ಕಮಲದ ದಳಗಳಂತೆ ವಿಶಾಲವಾಗಿದ್ದುವು. ತೆಳ್ಳಗಿರುವ ಸೊಂಟದಲ್ಲಿ ನೀಲಿಯವಸ್ತ್ರವನ್ನು ಧರಿಸಿದ್ದನು. ಒಂದು ಕೈಯಲ್ಲಿ ರತ್ನ ಖಚಿತವಾದ ಬಂಗಾರದ ಧನುಸ್ಸನ್ನೂ, ಇನ್ನೊಂದು ಕೈಯಲ್ಲಿ ಬಾಣವನ್ನೂ ಹಿಡಿದಿದ್ದನು. ಆ ಭೂಷಣಗಳನ್ನು ಧರಿಸಿದ್ದನು.

ಮರಗಳ ಹಿಂದೆ ಅವಿತುಕೊಂಡಿದ್ದ ಕನ್ಯಾಮಣಿಗಳಿಗೆ ಇಂತಹ ಮನ್ಮಥಾಕಾರನನ್ನು ನೋಡಿ ಆಶ್ಚರ್ಯವಾಯಿತು. ಹಿಂದೆಂದೂ ಅವರು ಈ ಕಾಡಿನಲ್ಲಿ ಯಾವ ಪುರುಷನೂ ಬಂದದ್ದನ್ನು ಅವರು ಕಂಡಿರಲೇ ಇಲ್ಲ. ಆಗ ಪದ್ಮಾವತಿಯು ತನ್ನ ಸಖಿಯರನ್ನು ಬಂದವನ ಕುಲ-ಶೀಲ-ತಂದೆತಾಯಿಗಳು, ಅವನ ಹೆಸರು ಮುಂತಾದುವುಗಳನ್ನು ವಿಚಾರಿಸುವಂತೆ ಹೇಳಿದಳು - ಸಖಿಯರು ಅದೇ ರೀತಿ ಶ್ರೀನಿವಾಸನನ್ನು ಕೇಳಿದರು.

''ಶ್ರೀನಿವಾಸನು ಹೇಳ ತೊಡಗಿದನು-ಕನ್ಯೆಯರೇ, ನಮ್ಮದು ಚಂದ್ರವಂಶವೆಂದು ತಿಳಿದವರು ಹೇಳುತ್ತಾರೆ. ನಮ್ಮ ತಂದೆ ವಸುದೇವ, ತಾಯಿ ದೇವಕಿ. ಬಲರಾಮ ನನ್ನ ಅಣ್ಣ, ಸುಭದ್ರೆ ನನ್ನ ತಂಗಿ, ಪಾಂಡವರು ನಮ್ಮ ಸೋದರತ್ತೆಯ ಮಕ್ಕಳು ನಮ್ಮ ತಾಯಿಗೆ ನಾನು ಎಂಟನೆಯ ಮಗ. ನಾನು ಕೃಷ್ಣಪಕ್ಷದಲ್ಲಿ ಹುಟ್ಟಿದವನಾಗಿರುವುದರಿಂದಲೂ, ಕೃಷ್ಣವರ್ಣದವನಾಗಿರು ವುದರಿಂದಲೂ ನನ್ನ ಕೃಷ್ಣನೆಂದು ಕರೆಯುತ್ತಾರೆ ಎಂದು ಹೇಳಿ ನೇರವಾಗಿ ಪದ್ಮಾವತಿಯ ಬಳಿಗೇ ಬಂದು, ಕುದುರೆಯ ಮೇಲೆ ಕುಳಿತೇ ಪದ್ಮಾವತಿಯ ಕುಲ-ಗೋತ್ರಗಳನ್ನು ವಿಚಾರಿಸಿದನು.

ಪದ್ಮಾವತಿಯು ನಾಚುತ್ತಾ ಹೇಳಿದಳು- ''ನಾವು ಕೂಡಾ ಚಂದ್ರವಂಶದವರೇ. ನಾನು ಆಕಾಶರಾಜನಪುತ್ರಿ ಹೆಸರು ಪದ್ಮಾವತಿ. ನಮ್ಮದು ಅತ್ರಿಗೋತ್ರ. ಈ ಪ್ರದೇಶವೆಲ್ಲಾ ಆಕಾಶರಾಜನಿಗೆ ಸೇರಿದ್ದು. ನೀ ನಿಲ್ಲಿರುವುದು ಸರಿಯಲ್ಲ, ಹೊರಟು ಹೋಗು''ಎಂದಳು.

ಶ್ರೀನಿವಾಸನು-ಅನ್ನ-ನೀರುಗಳನ್ನು ಬಯಸಿ ಬಂದವನಿಗೆ ಅದನ್ನು ಕೊಡಲಾಗದಿದ್ದಲ್ಲಿ ಮೃದುವಾದ ಮಾತನ್ನಾದರೂ ನುಡಿಯಬೇಕು. ನೀನು ಹೀಗೆ ಕ್ರೂರವಾಗಿ ಮಾತಾಡಬಾರದು. ಅದು ನಿನಗೆ ಶೋಭಿಸದು. ನನ್ನ ಮನಸ್ಸು ನಿನಗೆ ಸೋತಿದೆ. ನಾನು ನಿನ್ನ ಸಂಗವನ್ನು ಬಯಸುತ್ತಿದ್ದೇನೆ. ನೀನು ನನ್ನನ್ನು ಕೂಡಿದರೆ ಬಹಳ ಪುಣ್ಯಶಾಲಿಯಾಗುವೆ ಎಂದನು.

ಪದ್ಮಾವತಿಗೆ ಕೋಪದಿಂದ ಕಣ್ಣುಗಳು ಕೆಂಪಾದವು.

ಅವಳೆಂದಳು''ಎಲೈ ಮೂಢನೇ, ನಿನಗೆ ಜೀವಿಸಿರಲು ಆಶಯಿಲ್ಲವೆಂದು ತೋರುತ್ತಿದೆ. ನೀನೇನಾದರೂ ನಮ್ಮ ತಂದೆಯ ಕಣ್ಣುಗಳಿಗೆ ಬಿದ್ದರೆ, ಅವನು ನಿನ್ನನ್ನು ಕೊಂದೇ ಹಾಕುತ್ತಾನೆ ಇಲ್ಲಿಂದ ಶೀಘ್ರವಾಗಿ ಹೊರಟುಹೋಗು.''

ಶ್ರೀನಿವಾಸನೆಂದನು – ''ನನ್ನ ಇಷ್ಟಾರ್ಥವು ಪೂರೈಸಿದ ಮೇಲೆ ನನಗೆ ಮರಣವಾದರೂ ಸುಖಕರವೇ. ನಾನು ಕನ್ಯಾಪೇಕ್ಷೆಯಾಗಿ ಬಂದಿದ್ದೇನೆ. ನೀನು ನನಗೆ ಯೋಗ್ಯಳಾದ ಕನ್ಯೆಯಾಗಿದ್ದೀಯೆ. ಅಂದ ಮೇಲೆ ಇದರಲ್ಲಿ ತಪ್ಪೇನು? ಆಕಾಶರಾಜನು ಧರ್ಮವನ್ನು ತಿಳಿದವನು. ಅವನು ನನ್ನನ್ನು ಕೊಲ್ಲಲಾರನು.

ಈ ರೀತಿಯಾಗಿ ಮಾತು ಕತೆಗಳು ನಡೆಯ ತೊಡಗಿದವು. ಕೊನೆಗೆ ಶ್ರೀನಿವಾಸನು – ''ಹಣೆಯಲ್ಲಿ ಬರೆದದ್ದನ್ನು ಯಾರೂ ತಪ್ಪಿಸಲಾರರು. ಜಯವಾಗಲೀ, ಸೋಲಾಗಲೀ, ನಿನ್ನನ್ನು ಭೋಗಿಸಬೇಕೆಂದೇ ನಿಶ್ಚಯಿಸಿರುವೆನು'' ಎಂದು ತನ್ನ ಕುದುರೆಯನ್ನು ಮುಂದೆ ನೂಕಿದನು.

ಪದ್ಮಾವತಿಯು ಶ್ರೀನಿವಾಸನ ಈ ಉದ್ಧಟತನನವನ್ನು ಸಹಿಸಲಾರದೆ ಕೋಪದಿಂದ ಕೆರಳಿದಳು. ಅವಳೂ ಮತ್ತು ಅವಳ ಸಖಿಯರೂ ಕಲ್ಲುಗಳಿಂದ ಹೊಡೆಯಲಾರಂಭಿಸಿದರು. ಆ ಕಲ್ಲುಗಳು ಕುದುರೆಗೆ ಬಿದ್ದು ಅದು ಪ್ರಾಣವನ್ನು ನೀಗಿತು. ಶ್ರೀನಿವಾಸನು ಬಹಳ ದುಃಖಿತನಾಗಿ ಅಲ್ಲಿ ನಿಲ್ಲದೆ ಬೆಟ್ಟವನ್ನೇರಿ ಹೋರಟು ಹೋದನು. ನಂತರ ಅತೀವ ವೇದನೆಯಿಂದ ಹಾಸಿಗೆಯ ಮೇಲೆ ಮುಸುಕಿಟ್ಟು ಮಲಗಿದನು.

ಇತ್ತ ಬಕುಳೆಯು ಶ್ರೀನಿವಾಸನ ಆರೋಗಣೆಗಾಗಿ ಷಡ್ರಸೋಪೇತವಾದ ಭೋಜನವನ್ನು ಸಿದ್ಧಪಡಿಸಿದ್ದಳು. ಶ್ರೀನಿವಾಸನ ಆಗಮನವನ್ನು ಕಂಡು ಅವನನ್ನು ಆರೋಗಣೆಗೆ ಕರೆಯಲು ಬಂದಳು. ಆದರೆ ಶ್ರೀನಿವಾಸನು ಹಾಸಿಗೆಯಲ್ಲಿ ಮಲಗಿ ನಿಟ್ಟುಸಿರುಗಳನ್ನು ಬಿಡುತ್ತಿರುವುದನ್ನು ಕಂಡು ಅವಳಿಗೆ ಪರಿತಾಪವಾಯಿತು. ಆಕೆ ಮೃದುಮಾತುಗಳಿಂದ ಆತನನ್ನು ಊಟಕ್ಕೇಳುವಂತೆ ಕೇಳಿಕೊಂಡಳು.

ಶ್ರೀನಿವಾಸನು ಏಳಲಿಲ್ಲ, ಮಾತಾಡಲಿಲ್ಲ, ಕಣ್ಣುಗಳಲ್ಲಿ ನೀರು ಸುರಿಸುತ್ತಿದ್ದಾನೆ. ಗದ್ಗದಿತನಾಗಿದ್ದಾನೆ. ಆಗ ಬಕುಳೆಯು – ಸ್ವಾಮಿ, ಜಗದೊಡೆಯಾ, ಸರ್ವೋತ್ತಮನೇ ಸರ್ವರ ದುಃಖವನ್ನು ಪರಿಹರಿಸುವ ನೀನೇ ಹೀಗೇಕೆ ದುಃಖಿಸುತ್ತಿರುವೆ? ಇದೇನು ನಿನ್ನ ನಟನೆ? ಬೇಟೆಯಲ್ಲಿ ಏನನ್ನಾದರೂ ಕಂಡೆಯಾ? ಏಳು, ನಿನಗಾಗಿ ರುಚಿಕರವಾದ ಭೋಜನವನ್ನು ತಯಾರಿಸಿದ್ದೇನೆ. ನನಗೆ ದುಃಖವಾಗುತ್ತಿದೆ. ನಿನ್ನ ಇಷ್ಟಾರ್ಥವೇನೆಂಬುದನ್ನು ಸಂಕೋಚವಿಲ್ಲದೆ ತಿಳಿಸು. ನಾನು ಅದನ್ನು ನನ್ನ ಶಕ್ತಿಮೀರಿ ಪೂರೈಸಲು ಇಚ್ಛಿಸುತ್ತೇನೆ.''

ಹೀಗೆ ಎಷ್ಟು ಬಗೆಯಿಂದ ಸಮಾಧಾನ ಪಡಿಸಿದರೂ ಶ್ರೀನಿವಾಸನು ಏಳಲಿಲ್ಲ. ಆಗ ಬಕುಳಾದೇವಿಯು ''ಶ್ರೀ ಹರೀ, ನಿನಗೇಕೆ ಇಷ್ಟೊಂದು ಬಾಧೆಯಾಗುತ್ತಿದೆ – ಅರಣ್ಯದಲ್ಲಿ ಯಾವ ಅಪ್ಸರೆಯನ್ನಾದರೂ ಕಂಡೆಯಾ? ಗಂಧರ್ವ ಕನ್ಯೆಯ ನಿನ್ನ ಕಣ್ಣಿಗೆ ಬಿದ್ದಳೇ? ದಯಮಾಡಿ ಹೇಳು. ನಿನ್ನ ದುಃಕವನ್ನು ಕಂಡರೆ ನನಗೆ ನೀನು ಯಾರಲ್ಲಿಯೋ ಮೋಹಗೊಂಡಿರುವಂತಿದೆ ಹೇಳು.'' ಎಂದಳು.

ಆಗಲೂ ಶ್ರೀನಿವಾಸನು ಮಾತಾಡಲಿಲ್ಲ. ಬಕುಳೆಯು ಅವನ ಬಳಿ ಹೋಗಿ, ತನ್ನ ಸೆರಗಿನಿಂದ ಅವನ ಕಣ್ಣೀರನ್ನು ಒರೆಸಿ ಬಹಳ ಪ್ರೀತಿಯಿಂದ ಅವನ ಮೈದಡವಿ ''ಹೇ ದೇವದೇವನೇ, ಪುರಾಣ ಪುರುಷೋತ್ತಮ, ನಾನು ಖಂಡಿತವಾಗಿಯೂ ನಿನ್ನಾಸೆಯನ್ನು ಪೂರೈಸುತ್ತೇನೆ. ನಿನ್ನ ಅಭಿಲಾಷೆಯನ್ನು ಹೇಳು ತಡಮಾಡಬೇಡ'' ಎಂದು ಬೇಡಿಕೊಂಡಳು.

ಆಗ ಶ್ರೀನಿವಾಸನು ಅಮ್ಮಾ, ನಾನು ಅರಣ್ಯದಲ್ಲಿ ಅಲೌಕಿಕ ಸೌಂದರ್ಯವತಿಯಾದ ಒಬ್ಬ ಕನ್ನಿಕೆಯನ್ನು ಕಂಡೆ. ಅವಳು ಹೇಗಿದ್ದಳೆಂದರೆ–

*''ಸುರೂಪಾಂ ಸುಂದರೀಂ ಸುಭ್ರೂ ನೀಲಾಲಕ ವಿರಾಜಿತಾಂ*
*ಪೂರ್ಣೇಂದು ವದನಾಂ ಶ್ಯಾಮಾಂ ನೀಲಮಾಣಿಕ್ಯ ವಿಗ್ರಹಾಮ್*
*ರಮಾಸಮಾಮಿಮಾಂ ಕನ್ಯಾಂ ಘಟಯಾಶು ವರಾನನೇ''*

ಅಮ್ಮಾ, ಅವಳು ಬಹಳ ಸುಂದರಿಯಾಗಿದ್ದಾಳೆ, ಸುಂದರವಾದ ಹುಬ್ಬುಗಳುಳ್ಳವಳಾಗಿದ್ದಾಳೆ, ಅವಳು ಕಪ್ಪಾದ ಗುಂಗುರು ಕೂದಲುಗಳಿಂದ ಸೋಭಾಯಮಾನಳಾಗಿದ್ದಾಳೆ ಪೂರ್ಣಚಂದ್ರನಂತಿದೆ ಅವಳ ಮುಖ, ನೀಲ ಮಾಣಿಕ್ಯದಂತಹ ಹೊಳಪಾದ ಶರೀರ. ಸಾಕ್ಷಾತ್ ರಮಾದೇವಿಯಂತಿದ್ದಾಳೆ, ಅವಳು ಇನ್ನೂ ಕನ್ಯೆ ಅವಳನ್ನು ನನಗೆ ಮದುವೆ ಮಾಡಿಸು?

'ಅವಳ ಸಂಗವು ಪೂರ್ವಜನ್ಮದ ಪುಣ್ಯದಿಂದ ಮಾತ್ರ ದೊರಕುತ್ತದೆ. ಆಕೆಯನ್ನು ಪಡೆಯದ ಜೀವನವು ವ್ಯರ್ಥ. ಆಕೆ ಆಕಾಶರಾಜನ ಪುತ್ರಿಯಾಗಿದ್ದಾಳೆ. ಈ ಕಾರ್ಯದಲ್ಲಿ ನೀನು ನನಗೆ ನೆರವಾಗದಿದ್ದರೆ ನನಗೆ ಮರಣವೇ ನಿಶ್ಚಯ.

''ನೀನೇ ನನ್ನ ತಾಯಿ, ತಂದೆ, ಬಂಧು, ಬಳಗ, ನೀನೇ ನನಗೆ ಉದ್ಧವ, ಅಕ್ರೂರ, ಪ್ರಹ್ಲಾದ, ಅಜಾಮಿಳ, ಗಜರಾಜ, ಧೃವ, ಅರ್ಜುನ, ದ್ರೌಪದೀ ದೇವಿ. ಹೀಗೆ ನೀನೇ ನನಗೆ ಸರ್ವಸ್ವ. ನಿನ್ನ ಹೊರತೂ ನನ್ನ ಹಿತ ಚಿಂತನೆ ಮಾಡುವವರು ಇನ್ಯಾರೂ ಇಲ್ಲ. ಆ ಘನ್ನ ಮಹಿಮಳನ್ನು, ಪಡೆಯಬೇಕಾದರೆ ಪೂರ್ವದಲ್ಲಿ ಪುಣ್ಯ ಮಾಡಿರಬೇಕು. ಆಕೆಯನ್ನು ಬಯಸಿ ನಾನು ಹೋದರೆ ಅನ್ಯಾಯದಿಂದ ಅವಳೂ ಅವಳ ಸಖಿಯರೂ ಕಲ್ಲುಗಳನ್ನು ಒಗೆದರು. ನನ್ನ ಕುದುರೆಯು ಅಲ್ಲೇ ಪ್ರಾಣಬಿಟ್ಟಿತು. ಅವಳ ಹೊರತು ನಾನು ಬದುಕಲಾರೆ. ಅವಳೊಡನೆ ಎನ್ನ ಸಂಘಟನೆ ಮಾಡಿಸು.''

ಶ್ರೀನಿವಾಸನ ಮಾತುಗಳನ್ನು ಕೇಳಿ ಬಕುಳೆಗೆ ಸ್ವಲ್ಪ ಸಮಾಧಾನವಾಯಿತು. ಹಾಗೂ ಪದ್ಮಾವತಿಯ ಬಗ್ಗೆ ಕುತೂಹಲವೂ ಕೆರಳಿತು. ಆ ಮಹಾನುಭಾವಳ ವೃತ್ತಾಂತವನ್ನು ತಿಳಿದುಕೊಳ್ಳಬೇಕೆಂಬ ಬಯಕೆಯಾಯಿತು.

ಆಗ ವೆಂಕಟೇಶನು ಅವಳಿಗೆ ತ್ರೇತಾಯುಗದಲ್ಲಿ ತಾನು ವಿವಾಹವಾಗುತ್ತೇನೆಂದು ಹೇಳಿದ್ದ ವೇದವತಿಯೇ ಆಕೆಯೆಂದು ಆಕೆಯ ವೃತ್ತಾಂತವನ್ನೆಲ್ಲಾ ತಿಳಿಸಿದನು.

ನಂತರ ಬಕುಳ ಮಾಲಿಕೆಗೆ ಆಕಾಶರಾಜನ ಪಟ್ಟಣದ ಮಾರ್ಗವನ್ನು ತಿಳಿಸಿ, ಮೊದಲು ಕಪಿಲ ತೀರ್ಥದಲ್ಲಿ ಸ್ನಾನಮಾಡಿ, ಬಳಿಯಲ್ಲೇ ಇರುವ ಕಪಿಲೇಶ್ವರನನ್ನು ದರ್ಶನ ಮಾಡಿಕೊಂಡು ಹೋಗಬೇಕೆಂದು ಹೇಳಿದನು. ಶ್ರೀನಿವಾಸನ ಇಚ್ಛೆಯಿಂದ ಒಂದು ಕುದುರೆಯು ಸಿದ್ಧವಾಯಿತು. ಬಕುಳಾ ದೇವಿಯು ಬಹಳ ಸಂತಸ ಸಂಭ್ರಮಗಳಿಂದ ಆ ಕುದುರೆಯನ್ನು ಹತ್ತಿಕೊಂಡು ನಾರಾಯಣ ಪುರದ ಕಡೆಗೆ ನಡೆದಳು.

**ನಾರಾಯಣಪುರ**

ಬಕುಳಾದೇವಿಯು ಶ್ರೀನಿವಾಸನು ಹೇಳಿದ್ದ ಜಾಡನ್ನು ಅನುಸರಿಸಿ ನಾರಾಯಣಪುರದ ದಾರಿಯನ್ನು ಹಿಡಿದಳು ಬೆಟ್ಟವನ್ನಿಳಿದು ಮೊದಲು ಕಪಿಲ ತೀರ್ಥಕ್ಕೆ ಬಂದಳು.

ಕಪಿಲ ತೀರ್ಥವಾದರೋ ಒಂದು ಸುಂರವಾದ ಜಲಾಶ. ಶೇಷಾದ್ರಿಯ ತಪ್ಪಲಲ್ಲೇ ಇರುವ ರಮ್ಯ ಪ್ರದೇಶ. ಬೆಟ್ಟದ ಝರಿಗಳಿಂದ ಹರಿದು ಬರುವ ನೀರು ಸ್ಫಟಿಕ ನಿರ್ಮಲ ಹಾಗೂ ಮೈ-ಮನಗಳಿಗೆ ತಂಪನ್ನಿಯುವ ಸ್ವಚ್ಛ ಜಲರಾಶಿ. ಕಪಿಲ ಋಷಿಗಳಾದಿಯಾಗಿ ಅನೇಕರು ತಪಸ್ಸು ಮಾಡಿದ ಸ್ಥಳ. ಈಗಲೂ ಕೂಡಾ ಬೆಟ್ಟವನ್ನು ಕಾಲ್ನಡಿಗೆಯಲ್ಲಿ ಹತ್ತುವವರು ಮೊದಲು ಕಪಿಲ ತೀರ್ಥದಲ್ಲಿ ಮಿಂದು ಶುಚಿ ಭೂರ್ತರಾಗಿ ತಟಾಕದ ದಂಡೆಯಲ್ಲೇ ಇರುವ ಕಪಿಲೇಶ್ವರನಿಗೆ ಪೂಜೆ ಸಲ್ಲಿಸಿ ಬೆಟ್ಟವನ್ನು ಹತ್ತುವರು. ಹತ್ತಲಿಕ್ಕಾಗದವರೂ ಸಹ ಕಪಿಲ ತೀರ್ಥದ ಪುಣ್ಯ ಜಲದಲ್ಲಿ ಮಿಂದು ಕಪಿಲೇಶ್ವರನನ್ನು ಪೂಜಿಸುವರು.

ಹೀಗೆ ಬಕುಳೆಯು ಕಪಿಲ ತೀರ್ಥದಲ್ಲಿ ಮಿಂದು ಕಪಿಲೇಶ್ವರನ ದರ್ಶನಕ್ಕಾಗಿ ಮಂದಿರವನ್ನು ಹೊಕ್ಕಳು. ಬಕುಳೆಯೆಂದರೆ ಸಾಮಾನ್ಯ ಸ್ತ್ರೀಯಲ್ಲ. ಆಕೆ ಹಿಂದೆ ದ್ವಾಪರದಲ್ಲಿ ಶ್ರೀ ಕೃಷ್ಣನ ತಾಯಿಯಾಗಿದ್ದ ಯಶೋದಾ ದೇವಿಯೇ. ಆಗ ನಂದಗೋಕುಲವನ್ನು ಬಿಟ್ಟು ಮಥುರಾ ಪಟ್ಟಣಕ್ಕೆ ಹೋದ ಶ್ರೀಕೃಷ್ಣನು ಮತ್ತೆ ಗೋಕುಲ ಬೃಂದಾವನಕ್ಕೆ ಬರಲೇ

ಇಲ್ಲ. ಯಶೋದೆಗೆ ಅವನ ವಿವಾಹವನ್ನೂ ನೋಡಲಾಗಲಿಲ್ಲ. ಅದಕ್ಕೆ ಸ್ವಾಮಿಯೇ ಅವಳಿಗೆ ಕಲಿಯುಗದಲ್ಲಿ ತನ್ನನ್ನು ಸೇವಿಸುವವಳಾಗಿ ಇರಲು ಪದ್ಮಾವತಿಯೊಡನೆ ತನ್ನ ವಿವಾಹವನ್ನು ತೋರುವೆನೆಂದು ಹೇಳಿದ್ದನು.

ಅಲ್ಲದೆ ಬಕುಳೆಯೆಂದರೆ ಇನ್ನೂ ಒಂದು ಅರ್ಥವಿದೆ. 'ಬ' ಎಂದರೆ ಮೋಕ್ಷ 'ಕು' ಎಂದರೆ ಸ್ಥಾನ. 'ಲ' ಎಂದರೆ ಲಾಲಿಸುವಳು 'ಮಾ' ಎಂದರೆ ಲಕ್ಷ್ಮೀ ದೇವಿಯು 'ಲಾ' ಎಂದರೆ ಆಕೆಯನ್ನು ಲಾಲಿಸುವಳು. ಹೀಗಾಗಿ ಶ್ರೀಹರಿಯ ಮೋಕ್ಷಸ್ಥಾನವನ್ನು ಲಾಲಿಸುವಳಾದ್ದರಿಂದ ಆಕೆಗೆ ಬಕುಳ ಮಾಲಾ ಎಂಬ ಸಾರ್ಥಕ ಹೆಸರು.

ಬಕುಳ ಮಾಲೆಯು ಕಪಿಲೇಶ್ವರನ ಮಂದಿರವನ್ನು ಪ್ರವೇಶ ಮಾಡಿದಾಗ ಅಲ್ಲಿ ಅನೇಕ ಕನ್ಯೆಯರು ಅರ್ಚಕರಿಂದ ಕಪಿಲೇಶ್ವರನಿಗೆ ಅಭಿಷೇಕವನ್ನು ಮಾಡಿಸುತ್ತಿದ್ದರು. ಬಕುಳಾದೇವಿ ಅವರನ್ನು ವಿಚಾರಿಸಲಾಗಿ ಅವರು ಹಿಂದಿನದಿನ ತಾನೇ ತಮ್ಮ ರಾಜಪುತ್ರಿಯಾದ ಪದ್ಮಾವತಿಯು ಬಲು ಸುಂದರನಾದ ಕಿರಾತವೇಷದ ಪುರುಷನೊಬ್ಬನನ್ನು ಕಂಡು ಅವನೊಡನೆ ಕಲಹ ಮಾಡಿದುದಾಗಿಯೂ, ಅವನ ಕುದುರೆಯನ್ನು ಅವಳೂ ಅವಳ ಸಖಿಯರೂ ಕಲ್ಲಿನಿಂದ ಹೊಡೆದು ಕೊಂದರೆಂತಲೂ, ರಾಜಪುತ್ರಿಯ ಮನಸ್ಸು ಆ ಮಹಾಪುರುಷನಲ್ಲಿಯೇ ಕೀಲಿಸಿ ಹೋಗಿ ಕಾಮಜ್ವರದಿಂದ ಪೀಡಿತಳಾಗಿರುವುದನ್ನು ತಿಳಿಸಿ ರಾಜಗುರುಗಳಾದ ಬೃಹಸ್ಪತ್ಯಾಚಾರ್ಯರು ಈ ಮಹಾದೇವನಿಗೆ ಏಕಾದಶಿ ರುದ್ರಾಭಿಷೇಕವನ್ನು ಮಾಡಿಸಲು ಅಪ್ಪಣೆ ಕೊಡಿಸಿದ್ದರಿಂದ ತಾವು ಇಲ್ಲಿ ಬಂದಿರುವುದಾಗಿ ತಿಳಿಸಿದರು.

ಆಗ ಬಕುಳಾದೇವಿಯು ತನ್ನ ಪರಿಚಯವನ್ನು ಮಾಡಿಕೊಟ್ಟು, ತಾನು ಶ್ರೀನಿವಾಸನ ಸೇವಕಳೆಂದೂ, ತನಗೆ ಧರಣೀ ದೇವಿಯಬಳಿ ಮುಖ್ಯವಾದ ಕೆಲಸವಿರುವುದರಿಂದ ತನ್ನನ್ನು ಅವರ ಜೊತೆಯಲ್ಲಿ ಕರೆದೊಯ್ಯಬೇಕೆಂದೂ ಕೇಳಿಕೊಂಡಳು. ಅವರು ಹಾಗೆಯೇ ಆಕೆಯನ್ನು ನಾರಾಯಣಪುರಕ್ಕೆ ಕರೆದೊಯ್ದರು.

ಆಕಾಶರಾಜನ ಪಟ್ಟಣವಾದ ನಾರಾಯಣಪುರವು ಸಕಲ ಸೌಭಾಗ್ಯಗಳಿಂದ ಕೂಡಿ ಸಂಪದ್ಭರಿತವಾಗಿತ್ತು. ಆಕಾಶರಾಜನು ಪ್ರಜಾವತ್ಸಲನಾಗಿದ್ದನು. ಅವನ ಎರಡು ಕಣ್ಣುಗಳಂತೆ ಎರಡು ಮಕ್ಕಳು. ತ್ರಿಲೋಕ ಸುಂದರಿಯಾದ, ಸಾಕ್ಷಾತ ಲಕ್ಷ್ಮೀದೇವಿಯ ಆವೇಶವುಳ್ಳ ಪದ್ಮಾವತಿ ಹಾಗೂ ಮಗನಾದ ವಸುದಾನ. ರಾಜನು ಧರ್ಮದಿಂದ ರಾಜ್ಯ ಪರಿಪಾಲನೆ ಮಾಡಿಕೊಂಡಿದ್ದನು. ತನ್ನ ಮಗಳಿಗೆ ವಿವಾಹ ಯೋಗ್ಯನಾದ ವರನನ್ನು ವಿಚಾರಿಸುತ್ತಿದ್ದನು. ಬಹಳ ಅದ್ದೂರಿಯಿಂದ ಮದುವೆ ಮಾಡಿಕೊಡಲು ಸಿದ್ಧನಾಗಿದ್ದನು. ಆದರೆ ಇದೇನು ಹೀಗಾಯಿತು?

ತನ್ನ ಪ್ರಾಣಪದಕವಾಗಿದ್ದ ಪದ್ಮಾವತಿಯು ಸಖಿಯರೊಡನೆ ವನವಿಹಾರಕ್ಕೆ ಹೋಗಿ ಬಂದಾಗಲಿಂದ ಅನ್ನಾಹಾರಾದಿಗಳನ್ನು ತೊರೆದು ಬಿಟ್ಟಿದ್ದಳು. ಶ್ರೀನಿವಾಸನ ವಿರಹದಿಂದ ಪರಿತಪಿಸುತ್ತಿದ್ದಳು. ಕಾಮಜ್ವರದಿಂದ ಪೀಡಿತಳಾಗಿದ್ದಳು. ತಾನು ಒಬ್ಬ ಸುಂದರಾಕಾಯನಾದ ಕಿರಾತ ರೂಪಿಗೆ ತನ್ನ ಮನವನ್ನು ಅರ್ಪಿಸಿರುವುದಾಗಿಯೂ ಆತನನ್ನು ವರಿಸದೆ ತನ್ನ ಪ್ರಾಣನಿಲ್ಲದಾತದೆಂದೂ ತಾಯಿಯೊಡನೆ ಹೇಳಿದ್ದಳು. ಕಂಗೆಟ್ಟುಹೋಗಿದ್ದಳು. ಹೀಗೆ ಆಕೆಯ ಮನವನ್ನು ಅಪಹರಿಸಿದ ಆ ಕಿರಾತನಾರು? ಎಲ್ಲಿರುವನು. ಆಕಾಶರಾಜನು ಚಿಂತಾಕ್ರಾಂತನಾಗಿದ್ದನು.

**ಕೊರವಂಜಿ**

ಇತ್ತ ಶ್ರೀನಿವಾಸನು ಬಕುಳೆಯನ್ನು ನಾರಾಯಣಪುರಕ್ಕೆ ಆಕಾಶರಾಜನ ಬಳಿ ಕಳಿಸಿದ ಮೇಲೆ ಯೋಚಿಸಿದನು. ಬಕುಳೆಯು ಆಕಾಶರಾಜನನ್ನು ಕಂಡು ತನ್ನ ವಿಚಾರವನ್ನೆಲ್ಲಾ. ಹೇಳಿ ವಿವಾಹವನ್ನು ಘಟನೆ ಮಾಡವಳು ನಿಜ. ಆದರೆ ಆಕೆ ವಯಸ್ಸಾದವಳು. ಅವಳ ಮೇಲೇ ಭಾರವನ್ನು ಹಾಕುವುದು ಸರಿಯಲ್ಲ. ಸ್ವಾತಃ ತಾನೇ ಪ್ರಯತ್ನ ಪಡುವುದು ಒಳ್ಳೆಯದೆಂದು ಆ ಕಪಟನಾಟಕ ಸೂತ್ರಧಾರಿಯಾದ ಶ್ರೀಮನ್ನಾರಾಯಣನು ತಾನು ಕಣಿ ಹೇಳುವ ಕೊರವಂಜಿಯಾಗಿ ವೇಷ ಧರಿಸಿ ಬಕುಳೆ ಆಕಾಶರಾಜನ ಪಟ್ಟಣವನ್ನು ಸೇರುವ ಮೊದಲೇ ತಾನು ಹೋಗ ಬೇಕೆಂಬುದಾಗಿ ಸಂಕಲ್ಪಮಾಡಿಕೊಂಡನು.

ಒಬ್ಬ ವೃದ್ಧ ಕೊರವಂಜಿಯಾದನು. ಗುಲಗಂಜಿಯ ಆಭರಣಗಳನ್ನು ಧರಿಸಿದನು. ಚಿಕ್ಕ ಚಿಕ್ಕ ಶಂಖಗಳ ಹಾರವನ್ನು ಹಾಕಿಕೊಂಡನು. ಹಣೆಯು ಕುಂಕುಮದ ಬೊಟ್ಟನ್ನಿಟ್ಟನು. ಜೋಲು ಹೊಟ್ಟೆ, ಅಗಲವಾದ ಕಿವಿಗಳು, ಬೊಚ್ಚುಬಾಯಿ, ಸುಕ್ಕುಗಟ್ಟಿದ ಮುಖ, ಚೀರವಸ್ತ್ರವನ್ನುಟ್ಟನು. ಕುಪ್ಪುಸವನ್ನು ತೊಟ್ಟನು. ಬ್ರಹ್ಮನನ್ನು ತನ್ನ ಏಳು ತಿಂಗಳ ಕೂಸನ್ನಾಗಿ ಮಾಡಿಕೊಂಡನು. ಅವನಿಗೆ ಕೈ ಕಾಲು ಸಣ್ಣ, ಹೊಟ್ಟೆದಪ್ಪ. ಯಾವಾಗಲೂ ಅಳುತ್ತಿರುವ ಕೂಸು. ರುದ್ರವನ್ನು ಕೊರವಂಜಿಯು ಹಿಡಿದು ಕಣಿ ಹೇಳುವ ದಂಡವನ್ನಾಗಿ ಮಾಡಿಕೊಂಡನು. ಕೂಸನ್ನು ಬಟ್ಟೆಯಿಂದ ಬಿಗಿದು ಬೆನ್ನಿಗೆ ಕಟ್ಟಿಕೊಂಡನು. ಬ್ರಹ್ಮಾಂಡವನ್ನೇ ಬಿದಿರು ಬುಟ್ಟಿಯನ್ನಾಗಿ ಮಾಡಿಕೊಂಡು, ಧರ್ಮದೇವಿ ಎಂಬ ಹೆಸರಿನಿಂದ ನಾರಾಯಣಪುರದ ಬೀದಿಗಳಲ್ಲಿ ನಡೆದು ಬಂದನು.

ಹಿಂದೆಂದೂ ಕಂಡಿರದ ಇಂತಹ ಕೊರವಿಯನ್ನು ಕಂಡು ಆಕೆ ಸತ್ಯವಾರ್ತೆಯನ್ನು ಹೇಳುತ್ತಾಳೆಂದು ರಾಜ ಸೇವಕರು ಬಂದು ಧರಣೀ ದೇವಿಗೆ ತಿಳಿಸಿದರು.

**ಕೊರವಂಜಿಯು ಕಣಿಯನ್ನು ಹೇಳಿದಳು**

ಧರಣೀದೇವಿಯು ಆ ಕೊರವಂಜಿಯನ್ನು ಕರೆತರುವಂತೆ ತನ್ನ ಸಖಿಯರಿಗೆ ಹೇಳಿದಳು. ಅವರು ಒಡನೆಯೇ ಹೋಗಿ ಕೊರವಂಜಿಯನ್ನು ಕಂಡು ತಮ್ಮ ರಾಣಿಯು ಕೊರವಂಜಿಯನ್ನು ಅರಮನೆಗೆ ಕರೆದುಕೊಂಡು ಬನ್ನಿರೆಂದು ಹೇಳಿದ್ದಾಳೆಂದರು.

ಆದರೆ ಕೊರವಂಜಿಯು ಒಪ್ಪಲಿಲ್ಲ. ಎಲ್ಯೆ ಹುಡುಗಿಯರಾ? ನನ್ನೊಡನೆ ವಿನೋದ ಮಾಡುತ್ತಿರುವಿರಾ? ನಿಮ್ಮ ಮಹಾರಾಣಿಯಲ್ಲಿ ನಾನೆಲ್ಲಿ? ರಾಜಪತ್ನಿಗೆ ನಾನು ಬೇಕಾಗಿದ್ದರೆ ತಾನೇ ಬಂದು ಕರೆಯುತ್ತಿದ್ದಳು. ನಿಮ್ಮನ್ನೇಕೆ ಕಳಿಸುತ್ತಾಳೆ. ನೀವು ಬೇಕೆಂದೇ ನನ್ನನ್ನು ಕರೆಯುತ್ತಿದ್ದೀರಿ. ರಾಜಪತ್ನಿಯಲ್ಲಿ ನಮಗಾವ ಕೆಲಸವೂ ಇಲ್ಲ. ನಾನು ಬರುವುದು ಇಲ್ಲ ಹೋಗಿ ಹೋಗಿ'' ಎಂದು ಬಿಟ್ಟಳು. ಎಷ್ಟು ವಿಧದಲ್ಲಿ ಹೇಳಿದರೂ ಬರಲು

ಒಪ್ಪಲಿಲ್ಲ. ಆಗ ಅವರೆಲ್ಲಾ ಬಂದು ಧರಣೀ ದೇವಿಗೆ ಕೊರವಿಯು ಬರಲು ನಿರಾಕರಿಸಿದ್ದನ್ನು ಹೇಳಿದರು.

ಆಗ ಧರಣೀದೇವಿಯೇ ಕೊರವಂಜಿಯ ಬಳಿಗೆ ಹೋಗಿ 'ಅಮ್ಮಾ ಕೊರವಿ, ನೀನು ಮಂಗಳ ಸ್ವರೂಪಳು ಸಾಕ್ಷಾತ್ ಧರ್ಮದೇವತೆಯು. ನನ್ನ ಪೂರ್ವಜನ್ಮದ ಪುಣ್ಯದಿಂದ ಈ ನಗರಕ್ಕೆ ಬಂದಿರುವೆ. ನನ್ನ ಮನಸ್ಸು ಬಹಳ ಬಾಧೆ ಗೊಂಡಿದೆ ನೀನೇ ಇದನ್ನು ನಿವಾರಣೆ ಮಾಡಲು ತಕ್ಕವಳು. ದಯಮಾಡಿ ಅರಮನೆಗೆ ಬಾತಾಯಿ'' ಎಂದಳು.

ಧರ್ಮದೇವಿ ಎಂದಳು. 'ಪಟ್ಟದರಸೀ, ನನಗೆ ಅರಮನೆಗೆ ಬರಲು ಯಾವ ಅಭ್ಯಂತರವೂ ಇಲ್ಲ. ನಾನು ಬಹಳ ಖಂಡಿತವಾದಿನಿ. ಸತ್ಯವನ್ನೇ ಹೇಳುವವಳು. ನಾನು ಯಾರು? ಎಲ್ಲಿಂದ ಬಂದಿರುವೆನು? ಎಂಬುದನ್ನು ತಿಳಿಯುವವಳಾಗು. ನಾನು ನಾರಾಯಣನ ಪತ್ನಿ. ಈ ಮಗುವು ಆತನದೇ. ನಾನು ನನ್ನ ಗಂಡನ ಅಪ್ಪಣೆಯ ಮೇರೆಗೆ ಇಲ್ಲಿಗೆ ಬಂದಿದ್ದೇನೆ. ನನಗೆ ಹಿಂದಿನ ಮುಂದಿನ ವಿಷಯಗಳೆಲ್ಲಾ ತಿಳಿಯುತ್ತವೆ. ಇದು ■ ನಾರಾಯಣನ ಕರುಣೆ'.

ರಾಣಿಗೆ ಸಂತೋಷವಾಯಿತ್ತು. ಅವಳು ಬಹಳ ಆದರ ಮತ್ತು ವಿನಯದಿಂದ ಕೊರವಂಜಿಯನ್ನು ತನ್ನ ಅರಮನೆಗೆ ಕರೆದು ಕೊಂಡು ಬಂದಳು. ಅವಳನ್ನು ಚಿನ್ನದ ಸಿಂಹಾಸನದ ಮೇಲೆ ಕುಳ್ಳಿರಿಸಿ ಉಪಚರಿಸಿದಳು.

ಕೊರವಿಯು ರಾಜ ಪತ್ನಿಯನ್ನು ಕುರಿತು ಮಂಗಳ ಸ್ನಾನ ಮಾಡಿಕೊಂಡು ಹೊಸ ಉಡುಗೆಗಳನ್ನು ಉಟ್ಟುಕೊಂಡು ಹರಿಗುರುಗಳಿಗೆ ವಂದಿಸಿ ಬರುವಂತೆ ಹೇಳಿದಳು.

ಧರಣಿದೇವಿಯು ಹಾಗೆಯೇ ಮಾಡಿ ಮತ್ತೆ ಕೊರವಿಯ ಮಾತಿನಂತೆ ಬಂಗಾರದ ತಟ್ಟೆಯಲ್ಲಿ ಮುತ್ತು ರತ್ನಗಳನ್ನು ತುಂಬಿ ಬಹಳ ಭಕ್ತಿಯಿಂದ ಧರಣೀ ದೇವಿಯ ಮುಂದಿಟ್ಟಳು ಕೊರವಿಗೆ ರಾಣಿಯ ಭಕ್ತಿ ಭಾವವನ್ನು ಕಂಡು ಸಂತೋಷವಾಯಿತು. ಅವಳು ''ಮಹಾರಾಣಿ ನನಗೆ ನಿನ್ನ

ಮನೋಭೀಷ್ಟ ತಿಳಿದಿದೆ. ನಾನು ಸತ್ಯವಾದುದನ್ನೇ ಹೇಳುತ್ತೇನೆ. ಅದಕ್ಕೆ ಮೊದಲು ಹಸಿವೆಯಿಂದ ಆಳುತ್ತಿರುವ ನನ್ನ ಮಗುವಿಗೆ ಸ್ವಲ್ಪ ಅನ್ನವನ್ನು ಕೊಡು ಎಂದು ಕೇಳಿದಳು.''

ಧರಣೀದೇವಿಯು ಒಡನೆಯೇ ಹೋಗಿ ಒಂದು ಭಂಗಾರದ ಬಟ್ಟಲಲ್ಲಿ ಮಗುವಿಗೆ ಕ್ಷೀರಾನ್ನವನ್ನು ತಂದಕೊಟ್ಟಳು. ಅದು ಮನುಷ್ಯಾನ್ನವಾದುದರಿಂದ ಶಿಶುರೂಪಿಯಾದ ಬ್ರಹ್ಮದೇವರು ಅದನ್ನು ತಿನ್ನಲಿಲ್ಲ. ಆಗ ಕೊರವಂಜಿಯು ಮಗುವನ್ನು ಬಯ್ದು, ಒಂದು ಏಟನ್ನು ಕೊಟ್ಟು ತಾನೇ ತಿಂದು ಬಿಟ್ಟು ನಾನು ತಿಂದರೆ ಇದಕ್ಕೂ ಸಲ್ಲುತ್ತದೆ ಎಂದು ಹೇಳಿ ತಾಂಬೂಲವನ್ನು ತಂದುಕೊಡುವಂತೆ ಧರಣೀ ದೇವಿಯನ್ನು ಕೇಳಿದಳು. ಧರಣೀದೇವಿಯು ಏಲಕ್ಕಿ, ಪಚ್ಚಕರ್ಪೂರ ಇವುಗಳಿಂದ ಕೂಡಿದ ಸುವಾಸನಾಭರಿತವಾದ ಅಡಕೆ ಪುಡಿಯನ್ನೂ, ಚಿಗುರು ವಿಳ್ಳೇದೆಲೆಗಳನ್ನೂ ತಂದು ಕೊಟ್ಟಳು.

ಕೊರವಂಜಿಯು ತಂಬುಲವನ್ನು ಬಾಯಲ್ಲಿ ಹಾಕಿಕೊಂಡು ಸವಿಯುತ್ತಾ ಪೂರ್ವಾಭಿಮುಖವಾಗಿ ಕುಳಿತುಕೊಂಡು ಬುಟ್ಟಿಯನ್ನು ಮುಂದಿಟ್ಟುಕೊಂಡು ಕಾಲುಗಳನ್ನು ನೀಳವಾಗಿ ಚಾಚಿಕೊಂಡು ಕಣಿಯನ್ನು ಹೇಳಲು ಸಜ್ಜಾದಳು. ಈ ವಿಚಿತ್ರವಾದ ಕಣಿಯನ್ನು ಕೇಳಲು ದೇವತೆಗಳು ತಂತಮ್ಮ ವಿಮಾನಗಳಲ್ಲಿ ಪತ್ನಿಯರೊಡನೆ ಕುಳಿತು ಆಕಾಶದಲ್ಲಿ ನೆರೆದರು.

ಕೊರವಂಜಿಯು ಸ್ವಲ್ಪ ಹೊತ್ತು ಕಣ್ಣುಗಳನ್ನು ಮುಚ್ಚಿ ಧ್ಯಾನಮಗ್ನಳಾದಳು. ನಂತರ ಶ್ರೀಮನ್ನಾರಾಯಣನನ್ನು ನೆನೆಸಿಕೊಂಡು ತಾರತಮ್ಯಾನುಸಾರವಾಗಿ ಸಕಲದೇವತೆಗಳನ್ನೂ, ಋಷಿ-ಮುನಿಗಳನ್ನೂ ಸ್ಮರಿಸಿಕೊಂಡು - ''ಸತ್ಯವಾಗಿ ಪೇಳುವೆ ಕೇಳೆಯವ್ವಾ' ಎಂದು ಮತ್ತೆ ತಾಂಬೂಲವನ್ನು ತರಿಸಿಕೊಡು ಎಂದು, ಬಂಗಾರದ ಮೊರದಲ್ಲಿ ತುಂಬಿದ್ದ ಮುತ್ತನ್ನು ಸುರಿದು ಮೂರು ರಾಸಿಗಳನ್ನಾಗಿ ಮಾಡಿ, ಧರಣೀದೇವಿಯ ಕೈಯಲ್ಲಿ ತನ್ನ ಕೋಲನ್ನು ಕೊಟ್ಟು ಯಾವುದಾದರೂ ಒಂದು ರಾಶಿಯನ್ನು ಮುಟ್ಟುವಂತೆ ಹೇಳಿದಳು. ರಾಣಿಯು ಮಧ್ಯದ ರಾಶಿಯನ್ನು ಮುಟ್ಟಿದಳು.

ಕೊರವಿಗೆ ಅದನ್ನು ಕಂಡು ಸಂತೋಷವಾಗಿ 'ಮಹಾರಾಣೀ, ನೀನು ಮಂಗಳ ಕರವಾದ ಮಧ್ಯದ ರಾಶಿಯನ್ನು ಮುಟ್ಟಿದ್ದೀಯೆ. ಇದರಿಂದ ನಿನಗೆ ಬಹಳ ಒಳ್ಳೆಯದಾಗುವುದು. ನಿನ್ನ ಮಗಳ ವಿಚಾರವನ್ನು ಹೇಳುತ್ತೇನೆ ಕೇಳು-

ನಿನ್ನೆಯದಿನ ನಿನ್ನ ಮಗಳು ಅಶ್ವಾರೂಢನಾಗಿ ಕಿರಾತವೇಷದಲ್ಲಿ ಬಂದ ಒಬ್ಬ ಸುಂದರ ಪುರುಷನನ್ನು ಕಂಡಳು. ಅವನಾರುಗೊತ್ತೆ, ?

''ವೈಕುಂಠಸ್ಥೋ ಹರಿಃ ಸಾಕ್ಷಾತ್ ವರ್ತತೇ ವೇಂಕಟಾಚಲೇ ಶ್ರೀನಿವಾಸ ಇತಿ ಖ್ಯಾತೋ ವಿದ್ಯಾವಾನ್ ಧನವಾನ್ ಬಲೀ'' ವೈಕುಂಠದಲ್ಲಿ ನೆಲೆಸಿರುವ ಸಾಕ್ಷಾತ್ ಶ್ರೀಹರಿಯೇ ಶ್ರೀನಿವಾಸನೆಂಬ ನಾಮಧೇಯದಿಂದ ವೇಂಕಟಾಚಲದಲ್ಲಿ ವಾಸಿಸುತ್ತಿದ್ದಾನೆ ಅವನು ವಿದ್ಯಾವಂತನಾಗಿದ್ದಾನೆ, ಧನವಂತನಾಗಿದ್ದಾನೆ, ಬಲಶಾಲಿಯಾಗಿದ್ದಾನೆ. ನಿನ್ನ ಮಗಳು ಅವನಲ್ಲಿ ಮೋಹಗೊಂಡು ಕಾಮಜ್ವರ ಪೀಡಿತಳಾಗಿದ್ದಾಳೆ. ನನ್ನ ಈ ಮಾತು ಎಂದಿಗೂಸುಳ್ಳಲ್ಲ. ನಿನ್ನ ಮಗಳನ್ನು ಆ ಸಾಕ್ಷಾತ್ ಮನ್ಮಥನಿಗೂ ಮನ್ಮಥನಾದ ಆ ಶ್ರೀಹರಿಗೆ ಕೊಟ್ಟು ವಿವಾಹ ಮಾಡಿಸು. ಆಕೆಯ ಚಿಂತೆಯೆಲ್ಲಾ ದೂರವಾಗುವುದು. ಹೀಗೆ ನೀನು ನಿನ್ನ ಮಗಳನ್ನು ಅವನೊಡನೆ ವಿವಾಹ ಮಾಡಿಸದಿದ್ದಲ್ಲಿ ನಿನ್ನ ಮಗಳು ಉಳಿಯಲಾರಳು.''

ಈ ಮಾತನ್ನು ಕೇಳಿ ಧರಣೀದೇವಿಗೆ ಬಹಳ ದುಃಖವಾಯಿತು ಅವಳು ''ಹೇ ಧರ್ಮದೇವತೆಯೇ ಇಂತಹ ಅಮಂಗಳವನ್ನು ನುಡಿಯಬೇಡ, ಹೆಣ್ಣನ್ನು ಇಂತಹ ವರನಿಗೆ ಕೊಡಿ ಎಂದು ಯಾರೂ ಕೇಳದೆಯೇ, ನಾವು ಹೇಗೆ ಕೊಡುವುದು ಹೇಳು'' ಎಂದಳು ಕೊರವಂಜಿಯು- ''ನೀನು ಹಾಗೆ ಚಿಂತಿಸಬೇಡ. ಇನ್ನು ಸ್ವಲ್ಪಕಾಲದಲ್ಲಿ ವೆಂಕಟೇಶನ ಸಾಕುತಾಯಿಯಾಗಿರುವ ಬಕುಳಾದೇವಿ ಇಲ್ಲಿಗೆ ಬರುತ್ತಾಳೆ. ಆಕೆ ಶ್ರೀನಿವಾಸನಿಗೆ ನಿನ್ನ ಮಗಳನ್ನು ಕೇಳುತ್ತಾಳೆ. ನೀನು ಈ ವಿಚಾರವನ್ನು ನಿನ್ನ ಪತಿಯಾದ ಆಕಾಶರಾಜನಿಗೂ, ಬಂಧು ಮಿತ್ರರಿಗೂ ತಿಳಿಸಿ. ನಿನ್ನ ಕನ್ಯೆಯನ್ನು ಶ್ರೀನಿವಾಸನಿಗೆ ವಿವಾಹಮಾಡಿಕೊಡು, ಇದಿರಂದ ನಿಮಗೆಲ್ಲ ಕಲ್ಯಾಣವಾಗುತ್ತದೆ'' ಎಂದು ಹೇಳಿದಳು.

ಧರಣೀದೇವಿಯು ಹೇಗಾದರೂ ಮಾಡಿ ಆ ಶ್ರೀನಿವಾಸನಿಗೇ ತನ್ನ ಮಗಳನ್ನು ಕೊಡುತ್ತೇನೆಂದು ಪ್ರತಿಜ್ಞೆಮಾಡಲು ಕೊರವಂಜಿಯು ಸಂತೋಷ ಚಿತ್ತಳಾಗಿ ಮಗುವನ್ನು ಹೆಗಲಿಗೇರಿಸಿ ಹೊರಟೇಬಿಟ್ಟಳು.

**ಆತನಾ ಬಿಟ್ಟು ನಿಲ್ಲಲಾರೆನೆ**

ಕೊರವಂಜಿಯಿಂದ ಕಣಿ ಕೇಳಿದ ಧರಣೀದೇವಿಯು ಮಗಳ ಅಂತಃಪುರಕ್ಕೆ ಹೋಗಿ – "ಮಗಳೇ ನೀನು ಹೀಗೆ ಅನ್ನಾಹಾರಾದಿಗಳನ್ನು ಬಿಟ್ಟು ಸೊರಗುವುದನ್ನು ನಾನು ನೋಡಲಾರೆ. ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ಹೇಳು. ಸಂಕೋಚ ಪಡಬೇಡ. ನಾನು ಖಂಡಿತವಾಗಿಯೂ ನಡೆಸಿಕೊಡುತ್ತೇನೆ. ನಿನ್ನ ದುಃಖವು ನನಗೆ ಸಹಿಸಲಸಾಧ್ಯವಾಗಿದೆ" ಎಂದಳು.

ತಾಯಿಯಸಾಂತ್ವನದ ಮಾತುಗಳನ್ನು ಕೇಳಿ ಪದ್ಮಾವತಿಯ ದುಃಖವು ಇನ್ನೂ ಹೆಚ್ಚಿತು. ತಾಯಿಯ ಮಡಿಲಲ್ಲಿ ತಲೆಯಿಟ್ಟುರೋದಿಸತೊಡಗಿದಳು. ಧರಣೀದೇವಿಯು ಬಹಳ ಅಕ್ಕರೆಯಿಂದ ಮಗಳ ಮೈಯನ್ನು ನೇವರಿಸಿ ಬಾರಿ ಬಾರಿಗೂ ಅವಳನ್ನು ಸಂತೈಸಿದ ಮೇಲೆ ಪದ್ಮಾವತಿಯು ಹೇಳ ತೊಡಗಿದಳು.

"ಅಮ್ಮಾ, ಮೊನ್ನೆ ನಾನು ನನ್ನ ಸಖಿಯರೊಡನೆ ಪುಷ್ಪೋದ್ಯಾನವನಕ್ಕೆ ಹೋಗಿದ್ದಾಗ ಅಲ್ಲಿ ಅತಿಸುಂದರನಾದ, ಕಿರಾತವೇಷಧಾರಿಯಾದ ಒಬ್ಬ ಪುರುಷನನ್ನು ಕಂಡೆ, ಅವನು ನನ್ನ ಮನವನ್ನು ಅಪಹರಿಸಿದ್ದಾನೆ. ಆತನು ವಿಷ್ಣುವಲ್ಲದೆ ಬೇರೆಯವನಲ್ಲವೆಂದು ನನ್ನ ಮನಸ್ಸು ಹೇಳುತ್ತಿದೆ. ನಾನು ಹಗಲಿರುಳೂ ▪ ಮೇಘವರ್ಣನನ್ನೇ ನೆನೆಯುತ್ತಿದ್ದೇನೆ. ಅವನಿಗೆ ನನ್ನನ್ನು ವಿವಾಹಮಾಡಿಸಿ. ನಾನು ಆತನನ್ನು ಬಿಟ್ಟು ನಿಲ್ಲಲಾರೆ."

ಧರಣೀದೇವಿಯು ಮಗಳು ಮಾತನಾಡಿದ್ದನ್ನು ಕೇಳಿ ಸಂತೋಷಗೊಂಡಳು. "ಮಗಳೇ, ಅವನನ್ನು ಶ್ರೀಹರಿಯೆಂದೆ ಹೇಳುತ್ತಿರುವೆ. ಹಾಗಾದರೆ ನೀನು ಭಾಗ್ಯವತಿಯೇ ಹೌದು. ಆದರೂ ನನಗೊಂದು ಅನುಮಾನವಾಗುತ್ತಿದೆ. ನೀನು ಜ್ವರದ ತಾಪದಿಂದ ಬಳಲುತ್ತಿರುವೆ. ಆತನು

ನಿಜವಾಗಿಯೂ ವಿಷ್ಣುವೆನ್ನುವಿಯಾ?'' ಹೌದಮ್ಮಾ, ನನ್ನ ಮನಸ್ಸು ಸಾಕ್ಷಾತ್ ಶ್ರೀಹರಿಯನ್ನಲ್ಲದೆ ಇತರರಲ್ಲಿ ನಿಲ್ಲಲಾರದು. ನಾನು ಸತ್ಯವನ್ನೇ ಹೇಳುತ್ತಿದ್ದೇನೆ. ತಂದೆಗೆ ಈ ವಿಷಯವನ್ನು ತಿಳಿಸಿ ಹೇಳಮ್ಮಾ'' ಎಂದು ಕೇಳಿಕೊಂಡಳು.

ಧರಣೀ ದೇವಿಗೆ ಮಗಳ ಮಾತನ್ನು ಕೇಳಿ ಬಹಳ ಸಂತೋಷವಾಯಿತು ಆಕೆಯು ಮಗಳನ್ನು ಸಮಾಧಾನ ಪಡಿಸಿ ಆಕಾಶರಾಜನ ಬಳಿಗೆ ಬಂದು ಮಗಳ ಮನೋವೇದನೆಗೆ ಕಾರಣ ತಿಳಿಸಿ, ಕೊರವಂಜಿಯು ಬಂದು ಹೇಳಿದ ವಿಚಾರವನ್ನು ನಿರೂಪಿಸಿದಳು. ಅಲ್ಲದೆ ಶ್ರೀನಿವಾಸನಿಗೆ ಪದ್ಮಾವತಿಯನ್ನು ಕೇಳಲಿಕ್ಕಾಗಿ ಬಕುಳಾದೇವಿಯು ಬರುವ ವಿಷಯವನ್ನು ಹೇಳಿದಳು.

**ಬಕುಳಾ ದೇವಿಯು ಬಂದಳು**

ಇವರು ಹೀಗೆ ಮಾತನಾಡುತ್ತಿರುವಾಗಲೇ, ಶಿವ ಮಂದಿರಕ್ಕೆ ರುದ್ರಾಭಿಷೇಕ ಮಾಡಿಸಲು ಹೋಗಿದ್ದ ಪುರೋಹಿತರೂ, ಸಖಿಯರೂ ಪೂಜೆ ಮಾಡಿಸಿಕೊಂಡು ಹಿಂದಿರುಗಿದರು. ಅವರ ಜೊತೆಯಲ್ಲೇ ಬಕುಳಾದೇವಿಯೂ ಬಂದಳು

ಬಕುಳೆಯನ್ನು ನೋಡಿ ಧರಣೀ ದೇವಿಗೆ ಬಹಳ ಸಂತೋಷವಾಯಿತು. ಅವಳು ಬಕುಳೆಯನ್ನು ಎದುರುಗೊಂಡು ತನ್ನ ಪೀಠವನ್ನು ಕೊಟ್ಟು ಕುಳ್ಳಿರಿಸಿ, ಗೌರವಿಸಿ ಹೇಳಿದಳು – ಅಮ್ಮ ನೀನು ಬಂದುದು ಬಹಳ ಸಂತೋಷ. ಹೇಳು ನೀನು ಯಾವ ಕಾರ್ಯಾರ್ಥವಾಗಿ ಬಂದಿರುವೆ?

''ನಾನು ಶ್ರೀನಿವಾಸನಿಗೆ ಕನ್ಯಾನ್ವೇಷಣೆ ಮಾಡಲು ಬಂದಿದ್ದೇನೆ. ಶ್ರೀನಿವಾಸನು ನಿನ್ನ ಮಗಳಲ್ಲಿ ಮೋಹಗೊಂಡಿದ್ದಾನೆ.

'ಸಂತೋಷ, ನಾವೂ ಅದೇ ಚಿಂತೆಯಲ್ಲಿದ್ದೇವೆ. ಶ್ರೀನಿವಾಸನ ತಾಯಿ ತಂದೆಗಳಾರು? ಅವನ ಕುಲ-ಗೋತ್ರಗಳು ಯಾವುದು? ಅವನ ವಿಚಾರವಾಗಿ

ತಿಳಿಸು ಎಂದಳು. ಧರಣೀ ದೇವಿ ಬಕುಳೆಯು ಹೇಳ ತೊಡಗಿದಳು'- ಮಹಾರಾಣಿಯೇ ಕೇಳು, ಅವನ ತಾಯಿ ದೇವಕಿ, ತಂದೆ ವಸುದೇವ- ಚಂದ್ರವಂಶ, ಅವನ ಹೆಸರು ಕೃಷ್ಣ, ಗೋತ್ರ-ವಶಿಷ್ಟಗೋತ್ರ, ನಕ್ಷತ್ರ, ಶ್ರವಣ, ವಾಸಿಸುತ್ತಿರುವುದು ವೇಂಕಟಗಿರಿಯಲ್ಲಿ. ಬಹಳ ವಿದ್ಯಾವಂತ, ಧನವಂತ, ಸದಾಚಾರಸಂಪನ್ನ, ವಯಸ್ಸು ಇಪ್ಪತ್ತೈದು. ನೀನು ಬಹಳ ಸುಕೃತಶಾಲಿಯಾಗಿದ್ದೀಯೆ. ಇಂತಹ ಷಡ್ಗುಣೈಶ್ವರ್ಯ ಸಂಪನ್ನನಿಗೆ ನಿನ್ನ ಮಗಳನ್ನು ಕೊಡಬೇಕಾದರೆ ನೀನು ಬಹಳ ಪುಣ್ಯವನ್ನೇ ಮಾಡಿರಬೇಕು.

ಆದರೂ ಧರಣೀ ದೇವಿಗೆ ಒಂದು ಶಂಕೆ ಮೂಡಿತು. ಇಷ್ಟೆಲ್ಲಾ ರೂಪಸಂಪನ್ನ, ಗುಣವಂತ, ಹಣವಂತನಾದ ವರನಿಗೆ ಇಪ್ಪತ್ತೈದು ವರ್ಷಗಳಾದರೂ ಇನ್ನೂ ಏಕೆ ವಿವಾಹವಾಗಿಲ್ಲ. ಹಾಗೆಂದು ಆಕೆ ಬಕುಳೆಯನ್ನೇ ಕೇಳಿದಳು.

ಬಕುಳೆ ಹೇಳಿದಳು – "ನೀನು ಕೇಳಿದ್ದು ಸರಿಯಾಗಿದೆ. ಅವನಿಗೆ ಚಿಕ್ಕವಯಸ್ಸಿಗೇ ವಿವಾಹ ಮಾಡಿದೆವು. ಆದರೆ ಇಷ್ಟು ವರ್ಷಗಳಾದರೂ ಮಕ್ಕಳಾಗದಿರುವುದರಿಂದ ಎರಡನೇ ವಿವಾಹವನ್ನು ಮಾಡಲು ಪ್ರಯತ್ನ ಮಾಡುತ್ತಿದ್ದೇವೆ."

ಧರಣೀ ದೇವಿಯು ಬಕುಳೆಯನ್ನು ಅಂತಃಪುರದಲ್ಲಿಯೇ ಕುಳ್ಳಿರಿಸಿ ಆಕಾಶರಾಜನ ಬಳಿಗೆ ಬಂದು ಅವನಿಗೆ ಕೊರವಿಯ ಸಮಾಚರವನ್ನೆಲ್ಲಾ ತಿಳಿಸಿ, ತಮ್ಮ ಮಗಳು ಶ್ರೀನಿವಾಸನನ್ನೇ ಬಯಸಿ ಕೊರಗುತ್ತಿರುವ ವಿಚಾರವನ್ನೂ ಹೇಳಿ, ಈಗ ಬಕುಳಾದೇವಿಯು ಕನ್ಯಾರ್ಥಿಯಾಗಿ ತಮ್ಮಲ್ಲಿಗೆ ಬಂದಿರುವುದನ್ನೂ ಹೇಳಿದಳು.

ಇದರಿಂದ ಪರಮಹರುಷಗೊಂಡ ಆಕಾಶರಾಜನು ತನ್ನ ಮಗಳನ್ನು ನೋಡಲು ಬಂದನು. ಪದ್ಮಾವತಿಯನ್ನು ವಿಷಯವೇನೆಂದು ಕೇಳಿದನು. ಅವಳು ಸಂಕೋಚಗೊಂಡು ತಾನು ಎಲ್ಲವನ್ನೂ ತಾಯಿಯ ಬಳಿ

ಹೇಳಿರುವುದಾಗಿ ತಿಳಿಸಿದಳು. ಆಕಾಶರಾಜನು ಸಂತೋಷಭರಿತನಾಗಿ ಮಗಳನ್ನು ಮುದ್ದಿಸಿ ರಾಣಿಯ ಅಂತಃಪುರಕ್ಕೆ ಬಂದನು.

ಅಲ್ಲಿ ಬಕುಳಾ ದೇವಿಯನ್ನು ಕಂಡು ಅವಳನ್ನು ಗೌರವಿಸಿ ಮಗನಾದ ವಸುದಾನನಿಗೆ ಹೇಳಿ ಕಳಿಸಿದನು. ನಂತರ ದೇವಗುರುಗಳಾದ ಬೃಹಸ್ಪತ್ಯಾಚರ್ಯರಿಗೆ ಒಂದು ಪತ್ರವನ್ನು ಬರೆದು ಕೃಪೆ ಮಾಡಿ ಈಗಿಂದೀಗಲೇ ಬರಬೇಕೆಂದು ಹೇಳಿಕಳಿಸಿದನು. ವಸುದಾನನು ಚಂದ್ರಾಂಶನಾದುದರಿಂದ ಪತ್ರವನ್ನು ತೆಗೆದುಕೊಂಡು ನೇರವಾಗಿ ದೇವ ಲೋಕಕ್ಕೇ ಹೋಗಿ ಬೃಹಸ್ಪತ್ಯಾಚಾರ್ಯರಿಗೆ ಪತ್ರವನ್ನು ಮುಟ್ಟಿಸಿದನು. ಇಂದ್ರ ಸಭೆಯಲ್ಲಿ ಕುಳಿತಿದ್ದ ಬೃಹಸ್ಪತ್ಯಾಚಾರ್ಯರಿಗೆ ಪತ್ರವನ್ನು ಓದಿ ಬಹಳ ಸಂತೋಷವಾಯಿತು. ವಸುದಾನನೊಡನೆ ಕೂಡಲೇ ಆಕಾಶರಾಜನ ಪಟ್ಟಣಕ್ಕೆ ಬಂದರು. ರಾಜನು ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ರತ್ನ ಪೀಠದಲ್ಲಿ ಕುಳ್ಳಿರಿಸಿ ವಿಚಾರವನ್ನೆಲ್ಲಾ ತಿಳಿಸಿದನು. ಅವರು ಸಂತೋಷಗೊಂಡು ಹೇಳಿದರು.

''ಮಹಾರಾಜಾ, ನಿನಗೆ ಶುಭವಾಗಲಿ. ನಾನು ದೇವಲೋಕದಲ್ಲಿರುವವನು. ಯಾವಾಗಲಾದರೊಮ್ಮೆ ಭೂಲೋಕಕ್ಕೆ ಬರುತ್ತೇನೆ. ನಾನು ಹೇಳುವುದನ್ನು ಕೇಳು. ನಿಮ್ಮ ಪ್ರದೇಶಕ್ಕೆ ಹತ್ತಿರದಲ್ಲೇ ವೇದವ್ಯಾಸರ ಮಕ್ಕಳಾದ ಶುಕ್ರಾಚಾರ್ಯರಿದ್ದಾರೆ. ಅವರಿಗೆ ಹೇಳಿ ಕಳುಹಿಸು. ಅವರು ಶ್ರೀನಿವಾಸನ ಪರಮ ಭಕ್ತರು. ಅವನ ವಿಷಯವನ್ನು ವಿಸ್ತಾರವಾಗಿ ಬಲ್ಲವರು. ಅವರಿಂದ ನಿನ್ನ ಕಾರ್ಯ ನೆರವೇರುವುದೆಂದು ತಿಳಿಸಿ ಹೊರಟುಹೋದರು.

**ಶುಕಾಚಾರ್ಯರ ಆಗಮನ**

ಆಕಾಶರಾಜನು ತಕ್ಷಣವೇ ತಮ್ಮನಾದ ತೋಂಡಮಾನನಿಗೆ ಹೇಳಿಕಳಿಸಿದನು. ತೊಂಡಮಾನನಿಗೆ ಬ್ರಾಹ್ಮಣರಲ್ಲಿ ಬಹಳ ಭಕ್ತಿ ಗೌರವಗಳಿದ್ದುವು. ಅವನು ಒಡನೆಯೇ ಶುಕಮುನಿಗಳನ್ನು ಕರೆತರಲು ರಥಾ

ರೂಡನಾಗಿ ಹೊರಟನು. ಶುಕರ ಆಶ್ರಮಕ್ಕೆ ಬಂದನು. ಅಲ್ಲಿ ಅವರು ಧ್ಯಾನಾಸಕ್ತರಾಗಿದ್ದರು. ಅವರು ಏಳುವವರೆಗೂ ಕಾದಿದ್ದನು. ನಂತರ ತೋಂಡಮಾನನು ಅವರಿಗೆ ನಮಸ್ಕರಿಸಿ ತಾನು ಬಂದ ಕಾರಣವನ್ನು ತಿಳಿಸಿದನು.

ಶುಕಾಚಾರ್ಯರ ಸಂತೋಷ ಮೇರೆ ಮೀರಿತು. ಅವರು ಆನಂದದಿಂದ ಉದ್ರೇಕಗೊಂಡರು. ಧಿಗ್ಗನೆ ಎದ್ದರು ಸಂತೋಷದಿಂದ ಕುಣಿದಾಡಿದರು. ಕಮಂಡಲುವನ್ನು ಒಡೆದು ಹಾಕಿದರು. ಕೃಷ್ಣಾಜಿನವನ್ನು ಹರಿದು ಹಾಕಿದರು ತುಲಸೀ ಮಣಿಯನ್ನು ಕಿತ್ತುಹಾಕಿದರು. ಶ್ರೀ ಹರಿಯ ಪಾದಪದ್ಮಗಳಲ್ಲಿ ಮೈಮರೆತರು. ಮತ್ತರಾದರು.

ಮುಹೂರ್ತಕಾಲ ಹೀಗೆ ಆನಂದ ಭಾವಾವೇಶದಲ್ಲಿ ಮೈ ಮರೆತು ನಂತರ ಸಮಸ್ಥಿತಿಗೆ ಬಂದು ತೋಂಡಮಾನನನ್ನು ಕುರಿತು ಹೇಳಿದರು - "ನಾನು ಎಂತಹ ಆನಂದ ಕರವಾದ ವಾರ್ತೆಯ್ನು ಕೇಳುತ್ತಿದ್ದೇನೆ. ಇದು ಆಕಾಶರಾಜನ ಪೂರ್ವ ಪುಣ್ಯವಲ್ಲದೆ ಮತ್ತೇನು? ಸಾಕ್ಷಾತ್ ಶ್ರೀಹರಿಯಾದ ಶ್ರೀನಿವಾಸನಿಗೆ ಕನ್ಯಾದಾನ ಮಾಡುವುದು ಸಾಮಾನ್ಯ ವಿಷಯವೆ? ಇದೊಂದು ಮಹಾ ಪವಿತ್ರಕಾರ್ಯ. ತೋಂಡಮಾನಾ, ಸ್ವಲ್ಪ ಹೊತ್ತು ವಿಶ್ರಮಿಸಿಕೋ. ನಾನೀಗಲೇ ಆಹ್ನಿಕವನ್ನು ಮುಗಿಸಿಕೊಂಡು ಬರುತ್ತೇನೆ".

ಹೀಗೆ ಹೇಳಿ ಶುಕಮುನಿಗಳು ಪದ್ಮಸರೋವರದಲ್ಲಿ ಸ್ನಾನ ಮಾಡಿ ಮಧ್ಯಾಹ್ನಿಕವನ್ನು ಪೂರೈಸಿಕೊಂಡು ಸಿದ್ಧರಾದರು. ಶ್ರೀನಿವಾಸನ ಕಾರ್ಯಕ್ಕೆ ಹೋಗುವಾಗ ಹೊಸ ಉಡುಗೆಗಳನ್ನು ದರಿಸಬೇಕೆಂದು ಹೊಸ ದರ್ಭೆಗಳಿಂದ ತಾನೇ ಒಂದು ಕಿರೀಟವನ್ನು ಮಾಡಿಕೊಂಡರು. ದರ್ಭೆಗಳ ಕವಚವೂ ಸಿದ್ಧವಾಯಿತು. ಕೃಷ್ಣಾಜಿನದ ನಿಲುವಂಗಿಯನ್ನು ತೊಟ್ಟರು. ತುಲಸೀಮಣಿಯ ಹಾರವನ್ನು ಕೊರಳಲ್ಲಿ ಧರಿಸಿದರು. ನಂತರ ತೋಂಡಮಾನನರಥದಲ್ಲಿ ಕುಳಿತು ಆಕಾಶರಾಜನ ಪಟ್ಟಣದ ಕಡೆ ಪಯಣ ಬೆಳೆಸಿದರು.

## ಲಗ್ನ ಪತ್ರಿಕೆ

ಆಕಾಶರಾಜನು ತೋಂಡಮಾನನ ರಥದ ಚಕ್ರಗಳ ಧ್ವನಿಯನ್ನು ಕೇಳಿ ಎದ್ದನು. ಶುಕಮುನಿಗಳನ್ನು ತನ್ನ ಸಮಸ್ತ ಪರಿವಾರದೊಡನೆ ಎದುರುಗೊಂಡು ಅವರನ್ನು ಸ್ವಾಗತಿಸಿ ಅರ್ಘ್ಯ ಪಾದ್ಯಾದಿಗಳಿಂದ ಅವರನ್ನು ಉಪಚರಿಸಿ, ಅರಮನೆಗೆ ಕರೆದುಕೊಂಡು ಬಂದು ರತ್ನಪೀಠದಲ್ಲಿ ಕುಳ್ಳಿರಿಸಿದನು. ನಂತರ ಅವರಿಗೆ ಶ್ರೀನಿವಾಸನಿಗೆ ತಾನು ಮಗಳನ್ನು ಕೊಡುವುದನ್ನು ತಿಳಿಸಿ ಅವರ ಒಪ್ಪಿಗೆಯನ್ನು ಪಡೆದನು. ನಂತರ ವಧೂವರರ ಜಾತಕಗಳನ್ನು ಪರಿಶೀಲಿಸಬೇಕೆಂದು ಕೇಳಿಕೊಂಡನು.

ಶುಕಾಚಾರ್ಯರು ಬಕುಳಾದೇವಿಯನ್ನು ವರನ ಗೋತ್ರ-ನಕ್ಷತ್ರಗಳನ್ನು ಕೇಳಿದರು. ಬಕುಳೆಯು ವರನದು ವಶಿಷ್ಟ ಗೋತ್ರವೆಂದೂ, ಶ್ರವಣ ನಕ್ಷತ್ರವೆಂದೂ ಹೇಳಿದಳು. ರಾಜನು ಪದ್ಮಾವತಿಯದು ಅತ್ರಿಗೋತ್ರವೆಂತಲೂ, ಮೃಗಶಿರಾನಕ್ಷತ್ರವೆಂದೂ ಹೇಳಿದನು. ಶುಕರು ಜಾತಕಗಳನ್ನು ಪರಿಶೀಲಿಸಿದರು. ವಿವಾಹವನ್ನು ಶೀಘ್ರವಾಗಿ ಮಾಡಲು ಹೇಳಿದರು.

ಆಕಾಶರಾಜನು ಆ ಕ್ಷಣವೇ ತನ್ನ ಬಂಧು ಮಿತ್ರರವನ್ನು ಕರೆಸಿಕೊಂಡು ಈ ಶುಭ ಸಮಾಚಾರವನ್ನು ತಿಳಿಸಿದನು. ರಾಜನು ಅವರಿಗೆಲ್ಲಾ ವಿವಾಹದ ಬಗ್ಗೆ ತಿಳಿಸಿದನು. ಅವರೆಲ್ಲಾ ತುಂಬಾ ಸಂತೋಷದಿಂದ ತಮ್ಮ ಒಪ್ಪಿಗೆಯನ್ನು ತಿಳಿಸಿದರು. ನಂತರ ಆಕಾಶಾರಜನು ಶುಕರು ಹೇಳಿದಂತೆ ಲಗ್ನ ಪತ್ರಿಕೆಯನ್ನು ಬರೆದನು-

*''ಅಪ್ರಾಕೃತಾಯ ನಿತ್ಯಾಯ ಸಚ್ಚಿದಾನಂದ ಮೂರ್ತಯೇ*
*ಸ್ವತಂತ್ರಾಯಾ ದ್ವಿತೀಯಾಯಾ-ನಂತರೂಪಾಯ ಶಾಙ್ರ್ಗಣೇ*
*ಭಕ್ತ ಪ್ರಿಯಾಯ ಭಕ್ತೈಕ-ವೇದ್ಯೋ ಪಾದೇಯರೂಪಿಣೇ*
*ದೇವಾದಿದೇವ ಪೂಜ್ಯಾ ವಾಸುದೇವಾಯ ವಿಷ್ಣವೇ।*
*ಶ್ರೀನಿವಾಸಾಯ ಕೃಷ್ಣಾಯ ವೇಕಂಟಚಾಲ ವಾಸಿನೇ*

*ಸಾಂಗೈ ಸರ್ವೇಶ್ಚ ವೇದಾದ್ಯ್ಯರಾಗಮ್ಮೈಪುರಾಣಿಕೆ*
*ವೇದಿತಾನಂತ ಗುಮ ಕರ್ಮಣೇ-ಕರ್ಮದೇ ಶ್ರೀನಿವಾಸಾಯತೇ"*
*ಆಶೀರ್ವಾದಂ ಕರಿಷ್ಯಾಮಿ ಬಂಧುತ್ವಾಕ-ಹೇಸುರೋತ್ತಮ*
*ತ್ವತ್ಪಾದ ಪದ್ಮ ಸಂವಿಕ್ಷಾ-ಕಾಮ ಆಕಾಶನಾಮಕ."*

ಅಪ್ರಾಕೃತ ಮಂಗಳ ಮೂರ್ತಿಯೇ, ನಿತ್ಯನಾದವನೇ, ಸಚ್ಚಿದಾನಂದ ಸ್ವರೂಪನೇ, ಅನಂತರೂಪನೇ, ಸರ್ವತಂತ್ರ ಸ್ವತಂತ್ರನೇ, ಸರ್ವೋತ್ತಮನೇ, ಜ್ಞಾನಾನಾಂದಾದಿ ಗುಣನಿಧಿಯೇ ಭಕ್ತಪ್ರಿಯನೇ, ಶಾರ್ಙ್ಗಧನುವನ್ನು ಧರಿಸಿರುವವನೇ, ಬ್ರಹ್ಮ ರುದ್ರೇಂದಾದಿ ದೇವತೆಗಳಿಂದ ಪೂಜೆಗೊಳ್ಳುವವನೇ, ಸರ್ವತ್ರ ವ್ಯಾಪ್ತನೇ, ವಿಷ್ಣುವೇ, ವೇಂಕಟ ಶೈಲಾಧಿಪತಿಯೇ ಶ್ರೀ ಲಕ್ಷ್ಮೀಪತಿಯೇ, ನಿನ್ನ ಪಾದಪದ್ಮಗಳ ಮಕರಂದವನ್ನು ಆಸ್ವಾದಿಸಲು ನಾನು ಆತುರನಾಗಿರುತ್ತೇನೆ. ಆಕಾಶರಾಜನಾದ ನಾನು ಕೇವಲ ಬಂಧು ಭಾವದಿಂದ ನಿನಗೆ ಆಶೀರ್ವದಿಸುತ್ತೇನೆ ಸ್ವಾಮಿ.

ನಿನ್ನ ಪಾಪದ್ಮಗಳ ಆಶ್ರಯವನ್ನು ನಾನು ತ್ರಿಕರಣಪೂರ್ವಕವಾಗಿ ಬಯಸುತ್ತೇನೆ. ಕೇವಲ ನಿನ್ನ ಅನುಗ್ರಹವಿರುವುದರಿಂದ ನಾವು ನಾರಾಯಣಪುರದಲ್ಲಿ ಕ್ಷೇಮವಾಗಿದ್ದೇವೆ. ವಿಶ್ವ ಕುಟುಂಬಿಯಾದ ನೀನು ನಿನ್ನ ಕ್ಷೇಮವನ್ನು ತಿಳಿಸು ದೇವಾ, ನಾನು ಇಂದು ಅಂದರೆ ಚೈತ್ರ ಶುಕ್ಲ ತ್ರಯೋದಶಿಯ ದಿನ ಈ ಶುಭ ಪತ್ರವನ್ನು ಬರೆಯುತ್ತಿದ್ದೇನೆ. ನನ್ನ ಮಗಳು ಪದ್ಮಾವತಿಯನ್ನು ನಿನಗೆಕೊಟ್ಟು ವಿವಾಹ ಮಾಡಬೇಕೆಂದು ಗುರುಹಿರಿಯರು ನಿಶ್ಚಯಿಸಿರುತ್ತಾರೆ. ಲಗ್ನದ ಮುಹೂರ್ತವು ವೈಶಾಖ ಶುದ್ಧ ದಶಮಿ ಎಂದು ನಿಷ್ಕರ್ಷೆಯಾಗಿದೆ. ನೀನು ಬಂಧು ಮಿತ್ರರೊಡನೆ ಬಂದು ವಿಧಿಪೂರ್ವಕವಾಗಿ ಪದ್ಮಾವತಿಯ ಕೈ ಹಿಡಿದು ನಮ್ಮನ್ನೆಲ್ಲಾ ಉದ್ಧಾರಮಾಡು ಸ್ವಾಮಿ. ಶ್ರೀನಿವಾಸಾ, ನನ್ನಲ್ಲಿ ಅನುಗ್ರಹವನ್ನು ಮಾಡು."

ಹೀಗೆ ಲಗ್ನಪತ್ರಿಕೆಯನ್ನು ಬರೆದು ಮುಗಿಸಿ ಸ್ವಾಮಿ, ಯಾವ ರೀತಿಯಿಂದಲಾದರೂ ಶ್ರೀನಿವಾಸನು ಕೇಳುವಷ್ಟುವರದಕ್ಷಿಣೆಯನ್ನು ನಾನು

ಕೊಡುತ್ತೇನೆ. ಹೇಗಾದರೂ ಶ್ರೀನಿವಾಸನನ್ನು ಈಕೆಲಸಕ್ಕೆ ಒಪ್ಪಿಸಿ'' ಎಂದು ಪತ್ರಿಕೆಯನ್ನು ಅವರ ಕೈಗಿತ್ತನು.

'ಹಾಗೆಯೇ ಆಗಲಿ' ಎಂದು ಶುಕಮುನಿಗಳು ತಮ್ಮ ಶಿಷ್ಯರೊಂದಿಗೂ ಬಕುಳಾದೇವಿಯೊಂದಿಗೂ ವೇಂಕಟಾಚಲಕ್ಕೆ ಪ್ರಯಾಣ ಬೆಳೆಸಿದರು. ಮಟಮಟ ಮಧ್ಯಾಹ್ನ ಪ್ರಖರವಾದ ಸೂರ್ಯಕರಿಣಗಳು. ಆದರೆ ಯಾರಿಗೂ ಬೆಟ್ಟವನ್ನು ಏರುವುದು ಆಯಾಸವೇ ಎನ್ನಿಸಲಿಲ್ಲ.

ಶ್ರೀನಿವಾಸನ ಕಾತುರ

ಶ್ರೀನಿವಾಸನು ತಾಯಿಯು ಬರುವುದನ್ನೇ ಕಾತುರದಿಂದ ಕಾಯುತ್ತಿದ್ದನು. ಆದರೆ ಮೊದಲು ಧಾವಿಸಿ ಬಂದವರು ಶುಕ ಮುನಿಗಳು. ವೆಂಕಟೇಶನು ತಕ್ಷಣವೇ ಪೀಠದಿಂದೆದ್ದು ಅವರಿಗೆ ಹಸ್ತಲಾಘವ ಕೊಟ್ಟು ಗೌರವಿಸಿ - ಮುನಿಗಳೇ, ನನ್ನ ಕಾರ್ಯ ಕಾಯೋ ಹಣ್ಣೋ? ಎಂದು ಕೇಳಿದನು. ಅವರು ನಸುನಕ್ಕು ''ಶ್ರೀನಿವಾಸಾ, ನಿನ್ನ ವಿಡಂಬನೆಯನ್ನು ಸಾಕು ಮಾಡು. ನಿನ್ನ ಕೆಲಸವು ಕಾಯಾಗಲು ಸಾಧ್ಯವೇ? ಅದು ಎಂದಿಗೂ ಹಣ್ಣೇ. ನಿನ್ನ ಕೆಲಸವನ್ನು ಸಾಧಿಸಿಕೊಂಡು ಬಂದಿದ್ದೇನೆ''- ಎಂದರು.

ಶ್ರೀನಿವಾಸನು ಶುಕಮುನಿಗಳಿಗೆ ದೀರ್ಘದಂಡ ಪ್ರಣಾಮಮಾಡಿ- ಸಾವಿರ ಸುಳ್ಳನ್ನು ಹೇಳಿ ಒಂದು ವಿವಾಹವನ್ನು ಮಾಡಿಸು'' ಎಂದು ಬಲ್ಲವರು ಹೇಳುತ್ತಾರೆ. ಶುಕ ಮುನಿಗಳೇ, ನೀವು ಮಾಡಿದ ಉಪಕಾರ ಎಂದೆಂದಿಗೂ ಮರೆಯಲಾಗದಂಥದ್ದು, ನಿಮಗೆ ನಾನೇನು ಪ್ರತ್ಯುಪಕಾರವನ್ನು ಮಾಡಲಿ. ಇಗೋ, ನಿಮ್ಮನ್ನು ಆಲಿಂಗಿಸಿಕೊಳ್ಳುತ್ತೇನೆ. ನನ್ನ ಈ ಆಲಿಂಗನ ಭಾಗ್ಯವು ಹಿಂದೆ ಸೀತಾವೃತ್ತಾಂತವನ್ನು ತಂದಿದ್ದ ಹನುಮಂತನಿಗೆ ದೊರಕಿತ್ತು ಅದಕ್ಕೆ ದೊರಕುವ ಫಲ ಸತ್ಯಲೋಕಾಧಿಪತ್ಯ ಎಂದು ಸ್ವಾಮಿಯು ಶುಕಮುನಿಗಳನ್ನು ಆಲಿಂಗಿಸಿಕೊಂಡನು.

ಶ್ರೀನಿವಾಸನ ಆದರದ ನುಡಿಗಳಿಗೆ ಶುಕ ಮುನಿಗಳು ಪರಮಾನಂದ ಭರಿತರಾಗಿ ತಾವು ತಂದಿದ್ದ ಶುಭ ಪತ್ರಿಕೆಯನ್ನು ಶ್ರೀನಿವಾಸನಿಗೆ ಕೊಟ್ಟರು.

ಶ್ರೀನಿವಾಸನು ಆ ಪತ್ರಿಕೆಯನ್ನು ತಲೆಯ ಮೇಲಿಟ್ಟುಕೊಂಡನು. ನಂತರ ಅದನ್ನು ಓದಿಕೊಂಡು ತನ್ನ ಕುಲ-ಗೋತ್ರಗಳನ್ನೇ ಅರಿಯದ ಆಕಾಶರಾಜನು ಮಗಳನ್ನು ತನಗೆ ಪ್ರಾಣಿಗ್ರಹಣ ಮಾಡಿಕೊಡಲಿರುವುದು ಆಶ್ಚರ್ಯವೆಂದು ವಿಡಂಬನೆ ಮಾಡಿದನು. ಶುಕ ಮುನಿಗಳು-''ಶ್ರೀನಿವಾಸ, ನಿನಗ್ಯಾವ ಕುಲ-ಗೋತ್ರಗಳು ಸ್ವಾಮಿಾ ನೀನು ಅನಾದಿ, ಅನಂತ-ಹುಟ್ಟು, ಸಾವು, ಮುಪ್ಪು ವೃದ್ಧಿಗಳು ನಿನ್ನ ನಾಮ ಸ್ಮರಣೆ ಮಾಡಿದರೆ ಸಾಕು ದೂರ ಓಡಿಹೋಗುತ್ತವೆ. ಜಗದೀಶಾ, ನಿನ್ನ ವಿಡಂಬನೆಯನ್ನು ಸಾಕು ಮಾಡು. ನನ್ನ ಮಾತನ್ನು ಮನ್ನಿಸು ಆಕಾಶರಾಜನ ಮಗಳಾದ ಪದ್ಮಾವತಿಯನ್ನು ವಿವಾಹವಾಗು'' ಎಂದರು.

ಶ್ರೀನಿವಾಸನು ಆಕಾಶರಾಜನು ಬರೆದಿದ್ದ ಪತ್ರಿಕೆಯನ್ನು ಓದಿಕೊಂಡು ಸುಸ್ಮಿತವದನನಾಗಿ ಅದಕ್ಕೆ ಉತ್ತರವನ್ನು ಬರೆದನು-

*''ಶ್ರೀ ಮದ್ರಾಜಾಧಿರಾಜ, ರಾಜೇಂದ್ರಾ, ಕಿರೀಟಾ ಘೃಷ್ಟ, ಪಾದುಕ*
*ಅಸ್ಮದ್ಭಂಧು ವರೇಣ್ಯಾಢ್ಯ, ಗುಣಪೂರ್ವಸಮೃದ್ಧಿಮನ್*
*ಸುಧರ್ಮತನಯಾಕಾಶನಾಮ್ನಾಶಾಸು ಸುಕೀರ್ತಿಮನ್*
*ನಮೋನಮೋಸ್ತುತೇ ರಾಜನ್ ಶ್ರೀನಿವಾಸಸ್ಯ ಶಾಙ್ಗಣೇ*
*ಶ್ರೀನಿವಾಸೇನ ಬಾಲೇನ ವಿಜ್ಞಾಪ್ತಿ ಕ್ರಿಯತೇ ತ್ವಿಯಮಾ*
*ಭವದ್ಭಿರ್ಲಿಖಿತಂ ದೃಷ್ಟ್ವಾ ಸಂತೋಷೋಹ್ಯ ಭವನ್ಮಮ*
*ವೈಶಾಖ ಶುದ್ಧದಶಮಿ ಶುಕ್ರವಾರೇ ಮೋಹೋತ್ಸವೇ*
*ಅಂಗೀಕರೋಮಿರಾಜೇಂದ್ರ ಕನ್ಯಾಂ ತವ ಮಹೀಪತೇ/*
*ಯಥಾ ಪುರಾಸಾಗರೋಮೇ ಕನ್ಯಾದಾನ ಸುಕೀರ್ತಿಮಾನ್*
***ತಥಾ ದತ್ವಾತು ಮೇಕನ್ಯಾಂ ಭವೇಸ್ತ್ವಂ ಬಹುಕೀರ್ತಮಾನ್.***

(ರಾಜಾಧಿರಾಜನಾದ ಆಕಾಶರಾಜನೇ, ನೀನು ಸುಧರ್ಮರಾಜನ ಮಗ. ಬಹಳ ಕೀರ್ತಿವಂತನಾಗಿದ್ದೀಯೆ. ನೀನು ಶ್ರೇಷ್ಠಗುಣಗಳನ್ನು ಹೊಂದಿದ್ದೀಯೆ. ನಿನ್ನ ಶುಭ ಪತ್ರಿಕೆಯನ್ನು ಓದಿ ನನಗೆ ಮಹದಾನಂದವಾಯಿತು. ನಿನಗೆ ನಮಸ್ಕಾರ. ವೈಶಾಖ ಶುದ್ಧ ದಶಮಿ ಶುಕ್ರವಾರದ ದಿನ ನಾನು ನಿನ್ನ ಮಗಳನ್ನು ಕೈ ಹಿಡಿಯಲು ಒಪ್ಪಿದ್ದೇನೆ.

ಹಿಂದೆ ಹೀಗೆಯೇ ಸಮುದ್ರ ರಾಜನು ತನ್ನ ಕನ್ಯೆಯನ್ನು ನನಗೆ ಕೊಟ್ಟು ಪ್ರಖ್ಯಾತನಾದನು. ಅದೇ ರೀತಿ ನಾನು ನಿನ್ನ ಮಗಳನ್ನು ಕೈ ಹಿಡಿಯುತ್ತೇನೆ. ಇದರಿಂದ ನೀನೂ ಕೀರ್ತವಂತನಾಗುವೆ.

ಇತಿ ಬಾಲನಾದ ಶ್ರೀನಿವಾಸನ
ವಿಜ್ಞಪ್ತಿಗಳು

ಶ್ರೀನಿವಾಸನು ತಾನು ಹೀಗೆ ಪತ್ರವನ್ನು ಬರೆದು ಶುಕಾಚಾರ್ಯರ ಕೈಲಿಟ್ಟನು. ಶ್ರೀನಿವಾಸನ ಅಮೋಘವಾದ ಪ್ರೀತಿ ಮತ್ತು ಆದರಗಳಿಂದ ಶುಕಮುನಿಗಳು ಪರಮಾನಂದ ಭರಿತರಾಗಿ ಆಕಾಶರಾಜನ ಪಟ್ಟಣಕ್ಕೆ ಹೊರಟರು.

ಇತ್ತ ಮಾರ್ಗಾಯಾಸದಿಂದ ಬಳಲಿ ಬಕುಳೆಯು ಇನ್ನು ನಡೆಯಲಾಗದೆ ಒಂದು ಕಡೆ ಕುಳಿತು ಬಿಟ್ಟಿದ್ದಳು. ಅವಳನ್ನೇ ಹುಡುಕಿಕೊಂಡು ಬಂದಿದ್ದ ಶ್ರೀನಿವಾಸನು ಅವಳನ್ನು ಅಲ್ಲಿ ಕಂಡನು. ಅವನಿಗೆ ಬಹಳ ಕನಿಕರವಾಯಿತು. ಅವಳ ಬಳಿಯೇ ಕುಳಿತನು. ಮೃದುವಾಗಿ ಕೇಳಿದನು ''ಯಾಕಮ್ಮಾ ನೀನು ಬರಲು ಇಷ್ಟು ತಡವಾಯಿತು. ನೀನು ಹೋದ ಕೆಲಸವನ್ನು ಸಾಧಿಸಿದೆಯಾ?''

''ಬಹಳ ಕಷ್ಟ ಪಟ್ಟು ಸಾಧಿಸಿದೆ ಮಗೂ, ಪದ್ಮಾವತಿಯನ್ನು ನಿನಗೆ ಕೊಟ್ಟು ಮದುವೆ ಮಾಡಿಕೊಡುವ ಹಾಗೆ ಮಾತು ತೆಗೆದುಕೊಂಡು ಬಂದಿದ್ದೇನೆ. ಇನ್ನೊಂದು ಕೆಲಸವಾಯಿತು ನೋಡು. ನಾನು ಹೋಗುವ ಹೊತ್ತಿಗೆ ನಾರಾಯಣಾಶ್ರಮದ ಧರ್ಮದೇವಿಯೆಂಬ ಕೊರವಂಜಿಯು ಬಂದು ನಾನು ಮಾಡಬೇಕಾದ ಕಾರ್ಯವನ್ನೆಲ್ಲಾ ಅವಳು ಮಾಡಿ ಮುಗಿಸಿದ್ದಳು. ಅವಳು ಸಾಧಾರಣವಾದ ಕೊರವಂಜಿಯಲ್ಲ. ಅವಳೂ ಸಹಾ ಆಕಾಶರಾಜ, ಧರಣೀದೇವಿಯಿಂದ ಮಾತು ತೆಗೆದುಕೊಂಡು ನಂತರ ನಾರಾಯಣಶ್ರಾಮಕ್ಕೆ ಹೋರಟಳು.''

ನಂತರ ಶ್ರೀನಿವಾಸನು ಬಕುಳೆಯನ್ನು ಕರೆದುಕೊಂಡು ತನ್ನ ಮನೆಗೆ ಬಂದನು.

**ಶ್ರೀನಿವಾಸನ ವಿಡಂಬನೆ**

ಮನೆಗೆ ಬಂದ ಶ್ರೀನಿವಾಸನು ಮೌನವಾಗಿ ಸಂಕಟ ಪಡತೊಡಗಿದನು. ಮಾತನ್ನೇ ಆಡಲಿಲ್ಲ ಇದನ್ನು ಕಂಡು ಬಕುಳಾದೇವಿಯು ಕೇಳಿದಳು- ''ಇನ್ನೇನು ಸಂಕಟವಪ್ಪಾನಿನಗೆ. ನಿನ್ನ ಕಾರ್ಯಸಿದ್ಧಿಸಿತಲ್ಲಾ''

'ಅಮ್ಮಾ ನನಗೆ ವಿವಾಹವೇ ಬೇಡ ಎನ್ನಿಸುತ್ತಿದೆ'

'ಯಾಕೆ ಶ್ರೀನಿವಾಸಾ, ಹುಡುಗಾಟ ಆಡ್ತಾ ಇದ್ದೀಯಾ?'

''ಇಲ್ಲಮ್ಮಾ, ಈಗ ನಿಧಾನವಾಗಿ ಯೋಚನೆ ಮಾಡಿದಾಗ ನನಗೆ ಹೊಳೆಯುತ್ತಿದೆ. ನಾನು ಒಬ್ಬಂಟಿಗ. ನನಗೆ ಬಂಧು ಮಿತ್ರರು ಯಾರೂ ಇಲ್ಲ, ಆಕಾಶರಾಜನಾದರೋ ಒಂದು ರಾಜ್ಯದ ಅಧಿಪತಿ.' ಅವನಿಗೆ ಅನೇಕ ಬಂಧು ಮಿತ್ರರಿದ್ದಾರೆ. ರಾಜ್ಯ ಪರಿವಾರವಿದೆ. ಅಂತಹ ಬಂಧು ಮಿತ್ರ ಸಹಿತನಾಗಿ, ಧನಕನಕ ವಸ್ತು ವಾಹನಗಳುಳ್ಳ ರಾಜನೊಂದಿಗೆ ಬಂಧುತ್ವ ಬೆಳೆಸುವುದಕ್ಕೆ ನನಗೆ ಸಂಕೋಚವಾಗುತ್ತಿದೆ. ಸಮಾನಯೋಗ್ಯತೆಯುಳ್ಳವರು ಒಬ್ಬರೊಬ್ಬರು ಸಂಬಂಧವನ್ನು ಮಾಡಬೇಕು. ಅದನ್ನು ನೆನೆಸಿಕೊಂಡರೇ ನನಗೆ ದುಃಖವಾಗುತ್ತದೆ.

ಬಕುಳೆಗೆ ಈ ವಿಡಂಬನೆಯನ್ನು ಕಂಡು ನಗುಬಂದಿತು. ಹೇಳಿದಳು ಜಗತ್ತಿಗೇ ಪ್ರಭುವಾದ ನೀನು ಒಬ್ಬಂಟಿಗನೇ? ಶುಕಮುನಿಗಳೂ, ಗುರುಗಳೂ, ನಿನಗಾಗಿ ಎಷ್ಟು ಕಷ್ಟಪಟ್ಟಿದ್ದಾರೆ, ನಿನಗೇನು ಕಡಿಮೆಯಾಗಿದೆ? ನಿನಗೇನು ಮಕ್ಕಳು ಮರಿಗಳಿಗೆ ಕಡಿಮೆಯೇ? ಸಾಕ್ಷಾತ್ ರಮಾದೇವಿಯೇ ನಿನ್ನ ಪತ್ನಿ. ಬ್ರಹ್ಮ ರುದ್ರಾದಿಗಳು ನಿನ್ನ ಮಕ್ಕಳು ಮೊಮ್ಮಕ್ಕಳು. ಅಷ್ಟ ಮಹಿಷಿಯರು, ಹದಿನಾರು ಸಾವಿರ ಸ್ತ್ರೀಯರು ನಿನ್ನ ಹೆಂಡಂದಿರು. ಅವರಲ್ಲಿ ಒಬ್ಬೊಬ್ಬರಿಗೆ ಹತ್ತು ಹತ್ತು ಮಕ್ಕಳು ಅವರ ಮಕ್ಕಳುಗಳು. ಇಡೀ ಜಗತ್ತಿಗೇ ನೀನು ತಂದೆ. ಸರ್ವೋತ್ತಮ. ಇಂತಹ ನೀನು ಅಜ್ಞನಂತೆ ಅಳುವುದು ಸರಿಯಲ್ಲ. ಸಾಕು ಮಾಡು ನಿನ್ನ ವಿಡಂಬನೆ. ನಿನ್ನ ಇಚ್ಛಾ ಮಾತ್ರದಿಂದ ಎಲ್ಲರೂ ಬರುತ್ತಾರೆ ಎಲ್ಲರನ್ನೂ ಕರೆಸು' ಎಂದಳು.

ಶ್ರೀನಿವಾಸನು ಬಕುಳೆಯು ಹೇಳಿದಂತೆ ಗರುಡ-ಶೇಷರನ್ನು ಸ್ಮರಿಸಿದನು ಒಡನೆಯೇ ಅವರು ಎದುರಿಗೆ ಬಂದು ನಿಂತರು. ಆಗ ಸ್ವಾಮಿಯು ಸತ್ಯಲೋಕಕ್ಕೆ ಹೋಗಿ ಬ್ರಹ್ಮಾದಿಗಳನ್ನು ಕರೆತರುವಂತೆ ಗರುಡನಿಗೂ, ಕೈಲಾಸಕ್ಕೆ ಹೋಗಿ ರುದ್ರದೇವರನ್ನು ಕರೆತರಲು ಶೇಷದೇವರನ್ನೂ ಕಳಿಸಿದನು.

## ದೇವತೆಗಳ ಆಗಮನ

ಗರುಡ ದೇವನು ಅತಿ ತ್ವರೆಯಿಂದ ಸತ್ಯಲೋಕಕ್ಕೆ ಹೋಗಿ, ಬ್ರಹ್ಮನನ್ನು ಕಂಡು ಶ್ರೀನಿವಾಸನು ಕಳಿಸಿದ್ದ ಪತ್ರವನ್ನು ಕೊಟ್ಟನು. ಬ್ರಹ್ಮದೇವನು ಶ್ರೀನಿವಾಸನ ಪತ್ರಿಕೆಯನ್ನು ಭಕ್ತಿಯಿಂದ ತಲೆಯ ಮೇಲಿಟ್ಟುಕೊಂಡು ನಂತರ ಓದ ತೊಡಗಿದನು. ಶ್ರೀನಿವಾಸನು ಪತ್ರದಲ್ಲಿ ತನ್ನ ವಿವಾಹವು ಆಕಾಶರಾಜನ ಪುತ್ರಿಯಾದ ಪದ್ಮಾವತಿಯೊಡನೆ ನಿಶ್ಚಯವಾಗಿರುವುದರಿಂದ ದೇವತೆಗಳನ್ನೆಲ್ಲಾ ಕರೆದುಕೊಂಡು ಶೀಘ್ರವಾಗಿ ಬರಬೇಕೆಂದು ತಿಳಿಸಿದನು.

ಬ್ರಹ್ಮದೇವನಿಗೆ ಬಹಳ ಆನಂದವಾಯಿತು. ಬ್ರಹ್ಮದೇವನು ಒಡನೆಯೇ ಸತ್ಯಲೋಕದಲ್ಲಿರುವರೆಲ್ಲರಿಗೂ ಈ ವೃತ್ತಾಂತವು ತಿಳಿಯುವಂತೆಯೂ, ಎಲ್ಲರೂ ಪ್ರಯಾಣ ಮಾಡುವಂತೆಯೂ ಭೇರಿ-ದುಂದುಭಿಗಳನ್ನು ಬಾರಿಸಲು ಹೇಳಿದರು. ಭೇರಿಯ ಧ್ವನಿಯನ್ನು ಕೇಳಿದೊಡನೆಯೇ ಎಲ್ಲರೂ ಕುತೂಹಲ ಭರಿತರಾಗಿ ಬ್ರಹ್ಮನ ಬಳಿಗೆ ಬಂದರು. ಬ್ರಹ್ಮನು ಅವರೆಲ್ಲರಿಗೂ ಶ್ರೀನಿವಾಸನ ವಿವಾಹದ ವಿಚಾರವನ್ನು ತಿಳಿಸಿ, ಎಲ್ಲರೂ ಪ್ರಯಾಣಕ್ಕೆ ಅಣಿಯಾಗಿ ಬರಬೇಕೆಂದು ತಿಳಿಸಿದನು.

ನಂತರ ಬ್ರಹ್ಮದೇವನು ಸರಸ್ವತೀ ದೇವಿಯರಿಗೂ ಇತರ ದೇವತೆಗಳಿಗೂ ಈ ಶುಭಸಮಾಚಾರವನ್ನು ತಿಳಿಸಿ, ಎಲ್ಲರೂ ಒಡನೆಯೇ ಸಿದ್ಧರಾಗಿ ಹೊರಡಬೇಕೆಂದನು.

ಬ್ರಹ್ಮದೇವನು ಸಿಂಗರಿಸಿಕೊಂಡು ಸರಸ್ವತಿ, ಸಾವಿತ್ರಿ, ಗಾಯತ್ರಿಯರನ್ನು ಕೂಡಿಕೊಂಡು ಸಮಸ್ತ ಪರಿವಾರದೊಡನೆ ಹಂಸವನ್ನೇರಿಕೊಂಡು ಹೊರಟನು. ಚತುರಂಗ ಸೇನೆಯೂ ಮುಂದೆ

ಹೊರಟಿತು. ನಾನಾ ವಿಧವಾದ ವಾದ್ಯಗಳು ಮೊಳಗುತ್ತಿದ್ದವು. ಗಂಧರ್ವರು ಗಾನ ಮಾಡುತ್ತಿದ್ದರು. ಎಲ್ಲರೂ ಸಂಭ್ರಮದಿಂದ ಭೂಲೋಕವನ್ನು ತಲುಪಿದರು.

ಭೂಲೋಕದವರು ಬೆರಗಾದರು. ಅವರಿಗೂ ಶುಭಸಮಾಚಾರ ತಿಳಿಯಿತು. ಅವರೂ ಸಹಾ ಸಕಲ ಋಷಿ-ಮುನಿಗಳನ್ನು ಕೂಡಿಕೊಂಡು ತಂತಮ್ಮ ಯೋಗ್ಯತಾನುಸಾರವಾಗಿ ಅಲಂಕೃತರಾಗಿ ಬ್ರಹ್ಮದೇವನ ಪರಿವಾರದ ಜೊತೆಗೆ ಹೊರಟರು.

ಈ ರೀತಿಯಾಗಿ ಅಪಾರ ಜನ ಶ್ರೇಣಿಯು ಗಂಗೆ ಗೋದಾವರಿಗಳನ್ನು ದಾಟಿ ವೇಂಕಟಾಚಲವನ್ನು ಮುಟ್ಟಿತು.

ಶ್ರೀನಿವಾಸನಿಗೆ ತನ್ನ ಪ್ರೀತಿಯ ಮಗನನ್ನು ನೋಡಿ ತುಂಬಾ ಆನಂದವಾಯಿತು. ಬ್ರಹ್ಮದೇವನು ಶ್ರೀನಿವಾಸನಿಗೆ ದೀರ್ಘದಂಡ ಪ್ರಾಮವನ್ನು ಮಾಡಿದನು. ಶ್ರೀನಿವಾಸನು ಮಗನನ್ನು ಮೇಲೆಬ್ಬಿಸಿ ಅತ್ಯಂತ ಪ್ರೀತಿಯಿಂದ ಆಲಂಗಿಸಿಕೊಂಡನು. ಇವರಿಬ್ಬರೂ ಪರಸ್ಪರ ಸಂಭಾಷಿಸುತ್ತಿರುವಾಗಲೇ ಮುಖ್ಯ ಪ್ರಾಣನು ಭಾರತೀ ದೇವಿಯೊಡನೆ ಆಗಮಿಸಿ ಪರಮಾತ್ಮನಿಗೆ ನಮಸ್ಕರಿಸಿದನು.

ಹೀಗೆ ಅವರಿಬ್ಬರೂ ಬಂದನಂತರ ಕುಬೇರನು ತನ್ನ ಪತ್ನಿಯೊಡನೆಯೂ, ಐರಾವತವನ್ನು ಏರಿದ ದೇವೇಂದ್ರನು ಭಾರ್ಯೆಯಾದ ಶಚೀದೇವಿ ಮತ್ತು ದೇವತೆಗಳ ಪರಿವಾರದೊಡನೆ ಬಂದನು. ಮೇಷವಾಹನವನ್ನೇರಿದ ಅಗ್ನಿದೇವನು ಸ್ವಾಹಾ ಮತ್ತು ಮತ್ತು ಸ್ವಧೆಯರೊಡನೆ ಬಂದಿಳಿದನು. ಯಮದೇವನು ಕೋಣವನ್ನೇರಿಕೊಂಡು ಶ್ಯಾಮಲಾದೇವಿಯೊಡನೆ, ತನ್ನ ಸಮಸ್ತ ಪರಿವಾರನ್ನೂ ಕರೆದುಕೊಂಡು ಬಂದನು. ಮೊಸಳೆಯನ್ನೇರಿಕೊಂಡು ವರುಣನು ಭಾಗೀರಥೀ ದೇವಿಯೊಡನೆ ಬಂದನು. ಕುಬೇರನು ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಭಾರ್ಯೆ ಸಮೇತನಾಗಿ ಬಂದನು. ಮಹಾದೇವನು ಎತ್ತನ್ನು ಏರಿಕೊಂಡು ಪಾರ್ವತಿ

ಸಹಿತಾಗಿ ರುದ್ರಗಣಗಳೊಡನೆ ಬಂದನು. ಸೂರ್ಯ ಚಂದ್ರರು ತಂತಮ್ಮ ಹೆಂಡಂದಿರ ಸಹಿತರಾಗಿ ಬಂದರು. ಯಕ್ಷರು, ಗಂಧರ್ವರು, ಕಿನ್ನರರು ಸಕಲರೂ ನೆರೆದರು.

ಭೂಲೋಕದಿಂದ ಸಪ್ತ ಋಷಿಗಳು, ಅಪಾರ ವಿಷ್ಣುಭಕ್ತರು ವೇಂಕಟಾಚಲಕ್ಕೆ ಬಂದರು. ಶ್ರೀನಿವಾಸನು ಪ್ರತಿಯೊಬ್ಬರನ್ನೂ ವಿಚಾರಿಸಿಕೊಂಡು ಸ್ನೇಹಪೂರಿತನಾಗಿ ಅವರನ್ನೆಲ್ಲಾ ವಿಶ್ರಮಿಸಲು ಹೇಳಿದನು.

ಶ್ರೀನಿವಾಸನು ವಿಶ್ವಕರ್ಮನನ್ನು ಕರೆದು ಬಂದಿರುವ ಜನಶ್ರೇಣಿಗಾಗಿ ಐವತ್ತು ಯೋಜನ ವಿಸ್ತೀರ್ಣವೂ, ಮುವ್ವತ್ತು ಯೋಜನ ಅಗಲವಾಗಿಯೂ ಇರುವ ಭವನವನ್ನು ನಿರ್ಮಿಸುವಂತೆ ಹೇಳಿದನು. ದೇವೇಂದ್ರನು ಈ ಕಾರ್ಯವನ್ನು ತಾನು ಮಾಡಿಸುವೆನೆಂದು ಹೇಳಿ ವಿಶ್ವಕರ್ಮನ ಕೈಯಿಂದ ಅತಿ ಸುಂದರವೂ, ಆಶ್ಚರ್ಯಕರವೂ ಆದ ಭವನವನ್ನು ನಿರ್ಮಾಣ ಮಾಡಿಸಿದನು.

ನಂತರ ಶ್ರೀನಿವಾಸನು ಆಕಾಶರಾಜನ ಪಟ್ಟಣದಲ್ಲೂ ದಿವ್ಯವಾದ ಭವನಗಳನ್ನೂ, ಮನಮೋಹಕವಾದ ಕಲ್ಯಾಣ ಮಂಟಪವನ್ನೂ ರಚಿಸಬೇಕೆಂದು ದೇವೇಂದ್ರನಿಗೆ ಹೇಳಿದನು. ಅಂತೆಯೇ ದೇವೇಂದ್ರನು ವಿಶ್ವಕರ್ಮನನ್ನು ಜೊತೆಗೆ ಕರೆದುಕೊಂಡು ಆಕಾಶರಾಜನ ಪಟ್ಟಣಕ್ಕೆ ಹೋಗಿ ರಾಜನನ್ನು ಕಂಡು ಶ್ರೀನಿವಾಸನ ಇಚ್ಛೆಯನ್ನು ತಿಳಿಸಿದನು. ಆಕಾಶರಾಜನು ಸಂತೋಷದಿಂದ ಒಡಂಬಟ್ಟು ಸಹಕರಿಸುವುದಾಗಿ ಹೇಳಲು ಇಂದ್ರನು ವಿಶ್ವಕರ್ಮನ ಜೊತೆಯಲ್ಲಿ ಹೋಗಿ ಸ್ಥಳಗಳನ್ನು ನಿರ್ದೇಶನ ಮಾಡಿಕೊಂಡು ಪಟ್ಟಣದ ಸುತ್ತಲೂ ಚಿತ್ರ ವಿಚಿತ್ರವಾದ, ಮನೋಹರವಾದ. ಕಣ್ಮನಗಳನ್ನು ಸೆಳೆಯುವ ಭವನಗಳನ್ನು ನಿರ್ಮಾಣ ಮಾಡಿಸಿದನು. ಕಲ್ಯಾಣ ಮಂಟಪವಂತೂ ಇಂದ್ರನ ಸಭೆಗೂ ಮಿಗಿಲಾಗಿತ್ತು. ಆನೆ ಕುದುರೆ ಲಾಯಗಳು, ದವಸವನ್ನು ತುಂಬಿಡುವ ಭಂಡಾರ ಗೃಹಗಳು, ತಿಳಿ ನೀರಿನ ಸರೋವರಗಳು ಎಲ್ಲವೂ ಸಿದ್ಧವಾಗಿ ಬಿಟ್ಟವು.

ವೇಂಕಟಗಿರಿಯ ಮೇಲೆ ಶ್ರೀನಿವಾಸನು ವಾಸವಾಗಿರುವ ಹುತ್ತದ ಸುತ್ತಲೂ ದೇವಸಭೆ ಸೇರಿತ್ತು. ವಿವಾಹದ ಸಿದ್ಧತೆಗಳ ಬಗ್ಗೆ ವಿಚಾರ ವಿನಿಮಯ ನಡೆಯುತ್ತಿತ್ತು. ಸಕಲರೂ ಮುಹೂರ್ತದ ನಿರೀಕ್ಷಣೆಯಲ್ಲಿ ಕಾತರರಾಗಿದ್ದರು. ಇಂತಹ ಸಮಯದಲ್ಲಿ ಶ್ರೀನಿವಾಸನು ಒಂದು ವಿಡಂಬನೆ ಮಾಡಿದನು- "ದೇವತೆಗಳಿರಾ, ನಾನೇನೋ ವಿವಾಹಮಾಡಿಕೊಳ್ಳಲಿರುವೆನೆಂದು ನಿಮ್ಮನ್ನು ಕರೆಸಿಬಿಟ್ಟೆ, ಆದರೆ ನಾನು ಈ ವಿವಾಹದ ಬಗ್ಗೆ ನಿಮ್ಮ ಯಾರ ಅಭಿಪ್ರಾಯವನ್ನೂ ಕೇಳಲಿಲ್ಲ. ನಿಮಗೆ ವಧುವನ್ನು ತೋರಿಸಲಿಲ್ಲ ಏನೋ, ಎಲ್ಲವೂ ಆತುರದಲ್ಲಿ ನಡೆದು ಹೋಯಿತು. ಈಗಲಾದರೂ ಏನಾಯಿತು? ನಿಮ್ಮಲ್ಲಿ ಯಾರಿಗೊಬ್ಬರಿಗೂ ಇದು ಇಷ್ಟವಿಲ್ಲದಿದ್ದಲ್ಲಿ ನಾನು ಈಗಲೂ ವಿವಾಹದಿಂದ ಹಿಂದಕ್ಕೆ ಸರಿದುಬಿಡುತ್ತೇನೆ. ನೀವು ಏನೂ ಸಂಕೋಚವಿಲ್ಲದೆ ನಿಮ್ಮ ಅಭಿಪ್ರಾಯವನ್ನು ತಿಳಿಸಿ" ಎಂದನು.

ದೇವತೆಗಳಿಗೆ ದಿಗ್ಭ್ರಮೆಯಾಯಿತು. ಅವರೆಲ್ಲರೂ "ದೇವಾ ನೀನೆಂತಹ ಮಾತನಾಡುತ್ತಿರುವೆ? ಪುರಾಣಪುರುಷನಾದ ನಿನ್ನ ವಿವಾಹವನ್ನು ನೋಡಲಿಕ್ಕಾಗಿಯಲ್ಲವೆ ನಾವು ಬಂದಿರುವುದು. ಸರ್ವೋತ್ತಮನಾದ ನಿನ್ನ ಅಭಿಪ್ರಾಯವೇ ನಮ್ಮ ಅಭಿಪ್ರಾಯವಲ್ಲವೆ ಪ್ರಭು. ಈ ನಿನ್ನ ವಿಡಂಬನೆಯನ್ನು ನಾವು ಬಲ್ಲವರೇ", ಎಂದರು.

ಮೊಮ್ಮಗನಾದ ಈಶ್ವರ ಹೇಳಿದ - "ತಾತಾ, ನೀನು ಪ್ರಾಕೃತನಂತೆ ಮಾತನಾಡುತ್ತಿರುವೆಯಾ, ನೀನೇ ಹುಡುಗಿಯನ್ನು ಮೆಚ್ಚಿ, ಅವಳಿಗೆ ನನ್ನನ್ನು ಮದುವೆ ಮಾಡಿಸದಿದ್ದರೆ ನಾನು ಬದುಕಿರಲಾರೆ ಎಂದು ಪಾಪ, ಆ ಅಜ್ಜಿ ಬಕುಳಾದೇವಿಯನ್ನು, ಒಬ್ಬಳನ್ನೇ ಆಕಾಶರಾಜನ ಪಟ್ಟಣಕ್ಕೆ ಕಳಿಸಿದೆ. ಅವಳು ಅಲ್ಲಿಗೆ ಹೋಗಿ, ರಾಜ ದಂಪತಿಗಳ ಮನವೊಲಿಸಿ ಅವರು ನಿನಗೆ ಪದ್ಮಾವತಿಯನ್ನು ಕೊಟ್ಟು ವಿವಾಹಮಾಡಲು ಒಪ್ಪಿ ಎಲ್ಲಾ ಸಿದ್ಧತೆಗಳೂ ಆದ ಮೇಲೆ ಹೀಗೆ ಹೇಳುತ್ತೀಯಾ? ಸುಮ್ಮನೆ ಮದುವೆಗೆ ಸಿದ್ಧನಾಗು." ಮೊಮ್ಮಗನ ಮಾತನ್ನು ಕೇಳಿ ಶ್ರೀನಿವಾಸನಿಗೆ ಅತ್ಯಾನಂದವಾಯ್ತು. ಎಲ್ಲ

ಸಿದ್ಧತೆಗಳೂ ಮುಗಿದವು. ಇನ್ನು ವರನಮನೆಯಲ್ಲಿ ವಿವಾಹದ ಪೂರ್ವಸಿದ್ಧತೆಗಳಾದ ಪುಣ್ಯಾಹ, ಮತ್ತು ಅಷ್ಟವರ್ಗಗಳಾಗಬೇಕು. ಅದಕ್ಕೆ ಗಣಪತಿಯ ಪೂಜೆ, ವರುಣ ಪೂಜೆ, ನವಗ್ರಹ, ನಾಂದೀದೇವತೆ, ಇಷ್ಟದೇವತಾ ಪೂಜೆ, ಕುಲದೇವತಾ ಪೂಜೆ, ಸಮಾವರ್ತನಗಳು ನಡೆಯಬೇಕು. ಬ್ರಹ್ಮನು ಇವುಗಳ ಬಗ್ಗೆ ಹೇಳಲು ಶ್ರೀನಿವಾಸನು ಮಗನ ಮಾತುಗಳಿಗೆ ಸಂತೋಷಗೊಂಡು ಒಪ್ಪಿಗೆಯನ್ನುಕೊಟ್ಟನು.

### ಶ್ರೀನಿವಾಸನು ಬಂದವರಿಗೆ ಕೆಲಸಗಳನ್ನು ಹಂಚಿದನು

ಸ್ವಾಮಿಯು ವಶಿಷ್ಠರನ್ನು ಕರೆದು ಅವರಿಗೆ ಪೌರೋಹಿತ್ಯವನ್ನು ವಹಿಸಿದನು. ಬ್ರಹ್ಮದೇವನನ್ನು ಯಜಮಾನನ್ನಾಗಿ ಮಾಡಿದನು. ದೇವತೆಗಳು, ಋಷಿಗಳು, ಪುರೋಹಿತರುಗಳು, ಬ್ರಾಹ್ಮಣರು, ಇವರನ್ನು ಮರ್ಯಾದೆಯಿಂದ ನೋಡಿಕೊಂಡು ಅವರಿಗೆ ಆದರೋಪಚಾರಗಳನ್ನು ಮಾಡಿ, ಸನ್ಮಾನ ಮಾಡಲು ಶಿವನನ್ನು ನೇಮಿಸಿದನು. ದೇವತೆಗಳಿಗೆ ಆಹಾರವನ್ನು ನೀಡುವ ಕೆಲಸವನ್ನು ಷಣ್ಮುಖನಿಗೆ ಒಪ್ಪಿಸಿದನು. ಮದುವೆಗೆ ಬಂದವರನ್ನೆಲ್ಲಾ ಎದುರುಗೊಂಡು ಅವರನ್ನು ಯೋಗ್ಯವಾದ ಆಸನಗಳಲ್ಲಿ ಕೂಡಿಸುವ ಕೆಲಸವನ್ನು ಮನ್ಮಥನಿಗೆ ಒಪ್ಪಿಸಿದನು.

ನಂತರ ಅಗ್ನಿಯನ್ನು ಕರೆದು ಅವನನ್ನು ಅಡುಗೆಗಾಗಿ ನೇಮಿಸಿ ಅಗ್ನಿಯ ಪತ್ನಿಯರಾದ ಸ್ವಾಹಾ ಹಾಗೂ ಸ್ವಧ ದೇವಿಯರನ್ನು ಅಗ್ನಿಗೆ ನೆರವಾಗುವಂತೆ ತಿಳಿಸಿದನು. ವೇಂಕಟಗಿರಿಯ ಮೇಲೆ ನೆರೆಯುವ ಸಕಲರಿಗೂ ಆತಂಕವಿಲ್ಲದೆ ನೀರನ್ನು ಸರಬರಾಜು ಮಾಡಲು ವರುಣನಿಗೆ ಆಜ್ಞಾಪಿಸಿದನು. ಹೀಗೆ ದುಷ್ಟರೇನಾದರೂ ಗಲಭೆ ಮಾಡಿದರೆ ಅವರನ್ನು ಶಿಕ್ಷಿಸುವ ಕಾರ್ಯ ಯಮನದಾಯಿತು. ಸುಗಂಧ ದ್ರವ್ಯಗಳನ್ನು ತರಲು ವಾಯುದೇವರು, ದೀಪಾಲಂಕಾರಕ್ಕೆ ಚಂದ್ರ, ದಕ್ಷಿಣೆ, ವಸ್ತ್ರ ಇತ್ಯಾದಿಗಳನ್ನು ಕೊಡಲು ಕುಬೇರ, ಪಾತ್ರೆಗಳನ್ನು ತೊಳೆಯಲು ಅಷ್ಟವಸುಗಳು, ದೊನ್ನೆಗಳನ್ನು ಸಿದ್ಧಪಡಿಸಲು

ನವಗ್ರಹಗಳು ಹೀಗೆ ನಿಯೋಜಿತವಾಯಿತು. ಪ್ರತಿ ಒಬ್ಬರೂ ಬಹಳ ಸಂತೋಷ ಸಂಭ್ರಮಗಳಿಂದ ಕೆಲಸಗಳನ್ನು ಒಪ್ಪಿಕೊಂಡರು.

**ಕೊಲ್ಲಾಪುರದಿಂದ ಲಕ್ಷ್ಮೀದೇವಿಯರ ಆಗಮನ**

ವಿವಾಹದ ಪೂರ್ವಸಿದ್ಧತೆಗಳೆಲ್ಲಾ ಮುಗಿದವು. ಶ್ರೀನಿವಾಸನು ಮಂಗಳಸ್ನಾನ ಮಾಡಬೇಕಾದ ಶುಭಗಳಿಗೆ ಬಂದಿತು. ಬ್ರಹ್ಮದೇವನು ಸ್ವಾಮಿಯ ಬಳಿ ''ಬಂದು'' ಮಜ್ಜನವನು ಮಾಡೋ ದೇವಾ, ಸಜ್ಜನ ಪ್ರೀಯನೆ ಮಹಾನುಭಾವಾ'' ಎಂದು ವಿನಂತಿಸಿಕೊಂಡನು. ಆದರೆ ಶ್ರೀನಿವಾಸನು ಏಳಲಿಲ್ಲ. ಬಹಳ ದುಃಖಿತನಾಗಿರುವಂತೆ ನಟಿಸಿದನು. ಕಣ್ಣುಗಳಿಂದ ಅಶ್ರುಧಾರೆಹರಿಯುತ್ತಿತ್ತು. ಭಗವಂತನ ಈ ಆಟದಿಂದ ದೇವತೆಗಳಿಗೆಲ್ಲಾ ಆಶ್ಚರ್ಯವಾಯಿತು. ಶಂಕರನು ಕೇಳಿದನು ''ಸ್ವಾಮಿ, ನೀನೇಕೆ ದುಃಖಿಪಡುತ್ತಿರುವೆ. ನಿನ್ನ ನಾಮಸ್ಮರಣೆ ಮಾಡಿದವರಿಗೇ ದುಃಖ ವಿರುವುದಿಲ್ಲ. ಅಂಥಾದ್ದರಲ್ಲಿ ನಿನಗೆಂತಹ ದುಃಖ. ದುಃಖಿಸಲು ನೀನೇನು ಪ್ರಾಕೃತ ಮನುಷ್ಯನೇ''.

ಆಗ ಶ್ರೀನಿವಾಸನು - ''ಮಗೂ, ಭೃಗುಮಹರ್ಷಿಯು ನನ್ನ ಎದೆಯ ಮೇಲೆ ಪಾದತಾಡನ ಮಾಡಿದುದರಿಂದ ಲಕ್ಷ್ಮೀದೇವಿಯು ತನ್ನ ವಾಸಸ್ಥಾನವನ್ನು ಮನುಷ್ಯನೊಬ್ಬನು ಒದ್ದರೂ ಶ್ರೀನಿವಾಸನು ಆ ಋಷಿಯಲ್ಲಿ ಕೋಪಗೊಳ್ಳದೆ, ಕಠಿಣವಾದ ತನ್ನ ಎದೆಯನ್ನು ಒದ್ದದ್ದರಿಂದ ಋಷಿಯ, ಕಾಲಿಗೆ ನೋವಾಯಿತಲ್ಲಾ ಎಂದು ಋಷಿಯನ್ನು ಸಾಂತ್ವನ ಗೊಳಿಸಿ ಅವನ ಪಾದಗಳನ್ನು ಒತ್ತುತ್ತಿದ್ದಾನಲ್ಲಾ ಎಂದು ನನ್ನಲ್ಲಿ ಕೋಪಗೊಂಡು ಕೊಲ್ಲಾಪುರಕ್ಕೆ ಹೊರಟು ಹೋದಳು. ಅವಳೇನು ಸಮಾನ್ಯಳೆಂದು ತಿಳಿದೆಯಾ? ಬ್ರಹ್ಮನ ಪ್ರಳಯಕಾಲದಲ್ಲಿ ಈ ಭೂಮಿಯ ಮೇಲೆ ಪ್ರಳಯ ಜಲದ ಹೊರುತು ಏನೂ ಇರುವುದಿಲ್ಲ. ಆ ಸಮಯದಲ್ಲಿ ಆಲದೆಲೆಯಾಗಿ ನನಗೆ ಆಶ್ರಯಕೊಟ್ಟು ಸಕಲ ವಸ್ತುಗಳೂ ತಾನೇ ಆಗಿ ನನ್ನನ್ನು ರಮಿಸುವಳು. ಅಂತಹ ನನ್ನ ಅರ್ಧಾಂಗಿಯು ಈ ಸಮಾರಂಭಕ್ಕೆ

ಬಂದು, ನನ್ನ ಮನಸ್ಸನ್ನು ಮುದಗೊಳಿಸದೆ ಕೊಲ್ಲಾಪುರದಲ್ಲಿ ತನ್ನ ಭಕ್ತರನ್ನು ಕಾಪಾಡುತ್ತಾ ಕುಳಿತಿದ್ದಾಳೆ. ನನ್ನ ಸಮಸ್ತ ಬಂಧು ಬಾಂಧವರೂ ಇಲ್ಲಿ ನೆರೆದಿರುವಾಗ ರಮಾದೇವಿಯೊಬ್ಬಳು ಮಾತ್ರ ನನ್ನಿಂದ ದೂರವಾಗಿದ್ದರೆ ನನಗೆ ದುಃಖವಾಗುವುದಿಲ್ಲವೆ?''

ಶಂಕರನೆಂದನು ''ಈಗಲೂ ಕಾಲವೇನೂ ಮಿಂಚಿಲ್ಲ. ಆಕೆಯನ್ನು ಕರೆಸು'' ಎಂದನು. ಆಗ ಶ್ರೀನಿವಾಸನು ಸೂರ್ಯನನ್ನು ಕರೆದು ಕೊಲ್ಲಾಪುರಕ್ಕೆ ಹೋಗಿ ಲಕ್ಷ್ಮೀದೇವಿಯನ್ನು ಕರೆದುಕೊಂಡು ಬರುವಂತೆ ಹೇಳಿದನು. ಆದರೆ ಸೂರ್ಯನಿಗೆ ತಾನು ಸಣ್ಣವನು. ಹೋಗಿ ಕರೆದರೆ ಆಕೆ ಬರುವಳೋ, ಬಾರಳೋ ಎಂಬ ಸಂದೇಹವಾಯಿತು.

ಆಗ ಸ್ವಾಮಿಯು-ಹೇ ಕುಮಾರಾ, ನೀನು ಹೋಗಿ ಕರೆದರೆ ಬಂದೇ ಬರುತ್ತಾಳೆ. ಜಗತ್ತನ್ನೆಲ್ಲಾ ಪ್ರಕಾಶಗೊಳಿಸುವ ನಿನ್ನಲ್ಲಿ ಆಕೆಗೆ ತುಂಬಾ ಪ್ರೀತಿ. ನಿನ್ನ ಮಾತನ್ನು ಅವಳು ತೆಗೆದು ಹಾಕಳು. ಇನ್ನೂ ಒಂದು ಮಾತನ್ನು ಹೇಳುತ್ತೇನೆ ಕೇಳು. ನೀನು ಅವಳ ಗೃಹಕ್ಕೆ ಪ್ರವೇಶಮಾಡುತ್ತಲೇ ಕಣ್ಣುಗಳಲ್ಲಿ ಬಾಷ್ಪವನ್ನು ಸುರಿಸುತ್ತಾ ನಿಂತುಕೋ. ಆಕೆ ಏಕೆ ದುಃಖಿಸುತ್ತಿರುವೆ ಎಂದು ಕೇಳುತ್ತಾಳೆ. ಆಗ ನೀನು- ಶ್ರೀನಿವಾಸನಿಗೆ ತುಂಬಾ ಖಾಯಿಲೆಯಾಗಿದೆ. ನಿನ್ನನ್ನು ನೋಡಬೆಕೆಂದು ಅಪೇಕ್ಷಿಸುತ್ತಿದ್ದಾನೆ. ತಕ್ಷಣ ಹೊರಟು ಬಾ ಎಂದು ಹೇಳು. ಈ ವಾಕ್ಯವನ್ನು ಕೇಳುವುದೇ ತಡ. ಆಕೆ ಬಂದುಬಿಡುತ್ತಾಳೆ'' ಎಂದು ಹೇಳಿ ಕೊಟ್ಟನು.

ಸೂರ್ಯನು-ಸ್ವಾಮಿ, ನೀನೊಬ್ಬ ಮಾಟಗಾರ ಜಗನ್ಮಾತೆಯಾದ ಲಕ್ಷ್ಮೀ ದೇವಿಯು ಸರ್ವಜ್ಞಳು. ಅವಳು ನನ್ನ ಮಾತನ್ನು ನಂಬುವಳೇ? ಅವಳು-

*ಸರ್ವಜ್ಞಾ, ಸರ್ವಲೋಕೇಷು ವಿಶ್ರುತಾ ಕಮಲಾಲಯಾ*
*ಜಾನಾತಿ ಹೃದ್ಗತಂ ಕೃಷ್ಣ ಕಥಂ ಮಾಂ ವಿಶ್ವಸೇದ್ ವಿಭೋ*

ಆಕೆ ಸರ್ವಜ್ಞಳು. ಸರ್ವಲೋಕದಲ್ಲೂ ಪ್ರಖ್ಯಾತಿ ಪಡೆದವಳು.

ಎಲ್ಲರ ಹೃದಯವನ್ನು ಬಲ್ಲವಳು. ನನ್ನ ಮಾತಿನಲ್ಲಿ ಅವಳಿಗೆ ನಂಬಿಕೆಯಾಗುವುದೇ? ಎಂದು ತನ್ನ ಶಂಕೆಯನ್ನು ವ್ಯಕ್ತಪಡಿಸಿದನು. ಅದಕ್ಕೆ ಸ್ವಾಮಿಯು ನೀನು ಸಂಶಯ ಪಡಬೇಡ.

*ಮಮಮಾಯಾಮೋಹಿತಾ ಸಾ ಭವಿಷ್ಯತಿ ನ ಸಂಶಯಃ*

''ನನ್ನ ಮಾಯೆಯನ್ನು ಮೀರಲು ಯಾರಿಗೂ ಸಾಧ್ಯವಾಗದು. ಸ್ವತಃ ರಮಾದೇವಿಗೂ ಸಹಾ. ನೀನು ಹೋಗು ನಾನು ಹೇಳಿಕೊಟ್ಟಂತೆ ಹೇಳು. ಬಂದೇ ಬರುತ್ತಾಳೆ'' ಎಂದನು.

ಅದರಂತೆ ಸೂರ್ಯನು ಕೊಲ್ಹಾಪುರಕ್ಕೆ ಹೋಗಿ, ಜಗಜ್ಜನನಿಯನ್ನು ಕಂಡು ಶ್ರೀನಿವಾಸನು ಹೇಳಿಕೊಟ್ಟದ್ದನ್ನೇ ಹೇಳಿದನು. ಆಗ ಲೋಕಮಾತೆಯು ತಕ್ಷಣವೇ ರಥವನ್ನೇರಿ ಸೂರ್ಯನ ಜೊತೆಯಲ್ಲಿ ವೇಂಕಟಾಚಲಕ್ಕೆ ಬಂದುಬಿಟ್ಟಳು.

ರಮಾದೇವಿಯ ರಥದ ಶಬ್ದವನ್ನು ಕೇಳಿದ ಶ್ರೀನಿವಾಸನು ತನಗೆ ಬಹಳ ಖಾಯಿಲೆಯಾಗಿ, ಬಹಳ ಅಶಕ್ತನಾದಂತೆ ಸೋಗುಹಾಕಿ ಈಶ್ವರನ ಭುಜದ ಮೇಲೊಂದು ತೋಳನ್ನೂ, ಬ್ರಹ್ಮದೇವನ ಹೆಗಲ ಮೇಲೊಂದು ತೋಳನ್ನೂ ಹಾಕಿಕೊಂಡು ಲೋಕಮಾತೆಯನ್ನು ಎದುರುಗೊಳ್ಳಲು ಬಂದನು. ದೇವಿಗೆ ಸ್ವಾಮಿಯು ಈ ಆಟಕ್ಕೆ ನಗು ಬಂದುಬಿಟ್ಟಿತು. ಆಕೆಯು ''ಏನು ಮಾಯವಿದು ರಂಗಾ, ಏನು ಮಾಯವಿದು ಕೃಷ್ಣಾ. ಸ್ವಾಮಿ, ನೀನು ನನಗೆ ಬಹಳ ದುಃಖವೆಂದು ತೋರ್ಪಡಿಸುತ್ತಿರುವೆ. ನಾನು ಪಡುತ್ತಿರುವ ದುಃಖವನ್ನು ನಿನ್ನ ಮಗನಾದ ಬ್ರಹ್ಮನು ಚತುರ್ಮುಖಗಳಿಂದಲೂ ಬಣ್ಣಿಸಲಾರ'' ಎಂದು ಹೇಳಿ ತಾನು ತಂದಿದ್ದ ನಾನಾ ವಿಧವಾದ ಪರಿಮಳ ಪುಷ್ಪಗಳ ಮಾಲಿಕೆಯನ್ನು ಶ್ರೀನಿವಾಸನ ಕೊರಳಲ್ಲಿ ಹಾಕಿ ಅವನ ಪಾದಪದ್ಮಗಳಿಗೆ ನಮಿಸಿ–ಪ್ರಭೂ, ಕೃಷ್ಣಾ, ನಿನ್ನ ಆಟದಿಂದ ನನಗೆ ನಗೆಯು ಬರುತ್ತಿದೆ. ನನ್ನನ್ನು ಇಲ್ಲಿಗೆ ಯಾಕೆ ಕರೆತರಿಸಿದೆ ಹೇಳು ಎಂದಳು.

ಶ್ರೀನಿವಾಸನು ಬಹಳ ಪ್ರೀತಿಯಿಂದ ದೇವಿಯನ್ನು ಆಲಂಗಿಸಿಕೊಂಡು

ತನ್ನ ರತ್ನ ಪೀಠದಲ್ಲಿ ಆಕೆಯನ್ನು ಕುಳ್ಳಿರಿಸಿಕೊಂಡು ಹಿಂದೆ ರಾಮಾವತಾರದಲ್ಲಿ ನಡೆದ ಪ್ರಸಂಗವನ್ನು ಲಕ್ಷ್ಮೀದೇವಿಯ ಸ್ಮರಣೆಗೆ ತಂದನು. ವೇದವತಿಯ ಕಥೆಯನ್ನು ಹೇಳಿ ಸೀತಾದೇವಿಯೇ ತನಗಾಗಿ ರಾವಣನ ಅಶೋಕವನದಲ್ಲಿ ಕಷ್ಟಪಟ್ಟವಿಚಾರವನ್ನು ತಿಳಿಸಿ ಅವಳನ್ನು ವಿವಾಹವಾಗು ಎಂದು ಕೇಳಿಕೊಂಡದ್ದನ್ನೂ ಆಗ ತಾನು ಏಕ ಪತ್ನೀ ವ್ರತಸ್ಥನಾಗಿರುವುದರಿಂದ ಮುಂದೆ ಬರುವ ಒಂದು ಸಂದರ್ಭದಲ್ಲಿ ಮಾಡಿಕೊಳ್ಳುವೆನೆಂದು ಮಾತುಕೊಟ್ಟದ್ದನ್ನು ಜ್ಞಾಪಿಸಿದನು.

ಆಗ ಮಾತೆಯು - "ಗೋವಿಂದಾ, ಆ ವೇದವತಿಯೇ ಪದ್ಮಾವತಿಯಾಗಿ ಹುಟ್ಟಿರುವಳೊ" ಹಾಗಾದರೆ -

*ತಾಮಂಗೀಕರು ಗೋವಿಂದ, ವಿವಾಹ ವಿಧಿಪೂರ್ವಕರ್ಮ*
*ವಚನಂ ಸಫಲಂ ಕೃಷ್ಣ ಕುರುಮೇ ಭಕ್ತ ವತ್ಸಲ*

ಸ್ವಾಮಿ, ಪದ್ಮಾವತಿಯನ್ನು ವಿಧಿ ಪೂರ್ವಕವಾಗಿ ಪಾಣಿಗ್ರಹಣವನ್ನು ಮಾಡಿಕೋ, ನಿನ್ನ ವಚನವನ್ನು ಸಾರ್ಥಕ ಪಡಿಸಿಕೋ ಎಂದಳು.

ರಮಾದೇವಿಯರ ಅಭಿಮಾನದ ನುಡಿಗಳಿಗೆ ಶ್ರೀನಿವಾಸನ ಕಣ್ಣುಗಳಲ್ಲಿ ಆನಂದ ಭಾಷ್ಪ ತುಂಬಿತು.

ಮುಂದಿನ ಕೆಲಸಗಳಿಗೆ ಬ್ರಹ್ಮದೇವನೇ ಯಜಮಾನನಾಗಿ ನಿಂತನು. ಪಾತ್ರೆಗಳನ್ನೂ, ಕೊಪ್ಪರಿಗೆಗಳನ್ನೂ ತರಲು ಗರುಡನನ್ನು ನಿಯೋಜಿಸಿದನು. ಕ್ಷಣಾರ್ಧದಲ್ಲಿ ಗರುಡನು ಬೇಕಾದಷ್ಟು ಪಾತ್ರೆಗಳನ್ನು ತಂದನು. ವಾಯು ಮತ್ತು ವರುಣರು ಸೇರಿ ಅವುಗಳಲ್ಲಿ ಸ್ವಚ್ಛವಾದ ಹಾಗೂ ಸುವಾಸನಾಯುಕ್ತವಾದ ಜಲವನ್ನು ತುಂಬಿರಿಸಿದರು. ಅರುಂಧತಿಯನ್ನು ಮುಂದೆ ಮಾಡಿಕೊಂಡು ದೇವತಾಸ್ತ್ರೀಯರು ಮಂಗಳ ಕಾರ್ಯಗಳನ್ನು ನಡೆಸತೊಡಗಿದರು. ಉಮಾದೇವಿಯನ್ನು ಕಳಸಗಿತ್ತಿಯನ್ನಾಗಿ ನೇಮಿಸಿದರು. ಸಿದ್ಧರೂ, ವೈಖಾಸನ ಸ್ತ್ರೀಯರೂ ಭಗವಂತನ ಗುಣಗಳ ವರ್ಣನೆ ಮಾಡುವ ಹಾಡುಗಳನ್ನು ಹಾಡತೊಡಗಿದರು. ವಿವಾಹವೆಂದರೆ ಸ್ತ್ರೀಯರಿಗೆ ಸಂಭ್ರಮ

ವಲ್ಲವೆ ಎಲ್ಲಿ ನೋಡಿದರೂ ಅವರದೇ ಓಡಾಟ. ಕಾಶಿಯ ಪೀತಾಂಬರಗಳು ಝುಗಝುಗಿಸುವ ರೇಶಿಮೆಯ ಜರದ ಸೀರೆಗಳು ಕಣ್ಣು ಕೋರೈಸುವ ಒಡವೆಗಳು. ಕಲಶ, ಸ್ವತಃ ರಮಾದೇವಿಯರೇ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದರು.

ವೈಶಾಖ ಶುದ್ಧ ಸಪ್ತಮಿ ಬಂದಿತು ಅಂದು ಮಲೆನೀರಿನ ಕಾರ್ಯಕ್ರಮ. ನಾಲ್ಕು ದಿಕ್ಕುಗಳಲ್ಲಿ ಚಿನ್ನದ ಬಿಂದಿಗೆಗಳನ್ನಿರಿಸಿ ನೀರು ತುಂಬಿ ದಾರದಿಂದ ಸುತ್ತಿದರು. ಅದರ ಮಧ್ಯೆ ಚಿನ್ನದ ಮಣೆಯಮೇಲೆ ಕೂರುವಂತೆ ಶ್ರೀನಿವಾಸನಿಗೆ ಹೇಳಿದರು. ಶ್ರೀನಿವಾಸನು ಮತ್ತೊಂದು ನಾಟಕವನ್ನು ತೆಗೆದನು-ನನಗೆ ತಾಯಿ-ತಂದೆ, ಹೆಂಡತಿ, ಮಕ್ಕಳು, ಸಹೋದರರು ಯಾರೂ ಇಲ್ಲ. ನನಗೆ ಅಭ್ಯಂಜನವನ್ನು ಮಾಡಿಸುವರಾರು? ಆಗ ಬ್ರಹ್ಮನು ವಿಶ್ವ ಕುಟುಂಬಿಯಾದ ನೀನು ಒಬ್ಬಂಟಿಗನೇ? ಇಂತಹ ನಾಟಕವನ್ನು ಸಾಕು ಮಾಡು, ನಾವೆಲ್ಲಾ ನಿನ್ನ ಸ್ವಂತ ಬಂಧು ಬಳಗದವರಲ್ಲವೆ? ಲಕ್ಷೀ ದೇವಿಯೇ ನಿನ್ನ ಹೆಂಡತಿಯಾಗಿದ್ದಾಳೆ ಆಕೆಯೇ ನಿನಗೆ ತೈಲಾಭ್ಯಂಜನ ಮಾಡಿಸುತ್ತಾಳೆ. ಸುಮ್ಮನೆ ಕೂಡು' ಎಂದನು.

ಆಗ ಲಕ್ಷ್ಮೀದೇವಿಯು ಬಂಗಾರದ ಬಟ್ಟಲಲ್ಲಿ ಸುಗಂಧ ತೈಲವನ್ನು ತುಂಬಿಕೊಂಡು, ಭಗವಂತನ ಮೈಗೆ ಎಣ್ಣೆ ಹಚ್ಚುತ್ತಾ ಹೇಳಿದಳು.

*''ದೀರ್ಘಾಯುರ್ಭವ ಗೋವಿಂದ, ಪುತ್ರವಾನ್‌ಧನವಾನ್ ಭವ*
*ಚತುರ್ದಶನಾಂ ಲೋಕಾನಾಂ । ಏಕಚ್ಛತ್ರಾದಿಪೋಭವ''*

ಶರೀರಕ್ಕೆ ಎಣ್ಣೆಯನ್ನು ಹಚ್ಚಿ ಪನ್ನೀರನ್ನು ಬೆರೆಸಿದ ಪರಿಮಳೋದಕದಿಂದ ಸ್ನಾನ ಮಾಡಿಸಿದಳು. ಚಿನ್ನದ ಕೊಡಗಳಲ್ಲಿ ತುಂಬಿದ ಪುಣ್ಯ ತೀರ್ಥಗಳ ಉದಕವನ್ನು ಆನೆಗಳು ಸೊಂಡಿಲಿನಿಂದ ಎತ್ತಿ ಶ್ರೀನಿವಾಸನಿಗೆ ಅಭಿಷೇಕ ಮಾಡಿದವು.

ನಂತರ ಲಕ್ಷ್ಮೀದೇವಿಯು ಶ್ರೀನಿವಾಸನ ಮೈಯನ್ನೊರಿಸಿ, ಉಡಲು ದಿವ್ಯದುಕೂಲಗಳನ್ನಿತ್ತಳು. ಪಾರ್ವತೀದೇವಿಯು ತಂದುಕೊಟ್ಟ ಪರಿಮಳ

ಯುಕ್ತವಾದ ಧೂಪದಿಂದ ಶ್ರೀನಿವಾಸನ ಕಪ್ಪಾಗಿಯೂ, ಮನೋಹರವಾಗಿಯೂ ಇರುವ ಗುಂಗುರ ಕೂದಲುಗಳನ್ನು ಚೆನ್ನಾಗಿ ಒಣಗಿಸಿ ಚೆಂದದ ಗಂಟನ್ನು ಹಾಕಿದಳು. ಸಾವಿತ್ರಿಯು ಬಂಗಾರದ ಕಟ್ಟನ್ನು ಹಾಕಿದ್ದ ಕನ್ನಡಿಯನ್ನು ತೋರಿಸಿದಳು. ಶಚೀದೇವಿಯು ಬಂಗಾರದ ಚಾಮರಗಳಿಂದ ಮೆಲುವಾಗಿ ಬೀಸಿದಳು. ಗಂಗಾದೇವಿಯು ಬಂಗಾರದ ಪಾದುಕೆಗಳನ್ನು ಕೊಟ್ಟಳು. ನಂತರ ಶ್ರೀನಿವಾಸನು ಸರ್ವಾಲಂಕಾರ ಭೂಷಿತನಾಗಿ ರತ್ನಪೀಠದ ಮೇಲೆ ಕುಳಿತನು. ಅಲ್ಲಿಗೆ ಬಂದಿದ್ದ ಋಷಿಗಳು, ತಪಸ್ವಿಗಳು, ದೇವತೆಗಳು ಮೊದಲಾದವರು ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಬಳುವಳಿಗಳನ್ನು ಕೊಟ್ಟರು. ಹೀಗೆ ಸ್ವಾಮಿಯು ಸಕಲರಿಂದ ಪೂಜೆಗೊಂಡು ಮನ್ಮಥನಿಗೂ ಮಿಗಿಲಾದ ಮನ್ಮಥನಂತೆ ಕಂಗೊಳಿಸಿದನು.

**ಹೊರಟು ಕುಲದೇವತೆಯ ಪೂಜೆ ಮಾಡಿದನು**

ಶ್ರೀನಿವಾಸನು ಪೀಠದಿಂದ ಎದ್ದು ಋಷಿಗಳಿಗೆ ವಂದಿಸಿದನು. ನೆರೆದಿದ್ದವರೆಲ್ಲಾ ಹರ್ಷದಿಂದ ಶ್ರೀನಿವಾಸನಿಗೆ ಜಯಕಾರವನ್ನು ಹಾಕಿದರು. ವಶಿಷ್ಠರು ಶ್ರೀನಿವಾಸನಕೈಯಿಂದ ಸಂಕಲ್ಪವನ್ನು ಮಾಡಿಸಿ ಪುಣ್ಯಾಹವನ್ನು ನೆರವೇರಿಸಿದರು. ಅಷ್ಟವರ್ಗಾದಿ ಕಾರ್ಯಕ್ರಮಗಳು ನಡೆದವು. ಬ್ರಹ್ಮದೇವನು ಬ್ರಾಹ್ಮಣ ಸುವಾಸಿನಿಯರಿಗೆ ದಕ್ಷಿಣೆ ತಾಂಬೂಲವನ್ನು ಕೊಟ್ಟನು.

ಮತ್ತೆ ಶ್ರೀನಿವಾಸನು ತನ್ನ ಕುಲದೇವತೆಯಾದ ಶಮೀವೃಕ್ಷವನ್ನು ಪೂಜಿಸಲು ವಶಿಷ್ಠರೊಡಗೂಡಿ ಕುಮಾರತೀರ್ಥದ ಬಳಿಯಿದ್ದ ಶಮೀ ವೃಕ್ಷವನ್ನು ಪೂಜಿಸಿದನು. ತನ್ನ ವಿವಾಹಕಾಲದಲ್ಲಿ ಯಾವುದೇ ವಿಘ್ನಗಳಾಗಲೀ, ತೊಂದರೆಗಳಾಗಲಿ ಬರದಿರುವಂತೆ ನೋಡಿಕೊಳ್ಳಬೇಕೆಂದು ಶಮೀದೇವತೆಯನ್ನು ಪ್ರಾರ್ಥಿಸಿ, ಆ ವೃಕ್ಷದಿಂದ ಒಂದು ಕೊಂಬೆಯನ್ನು ತಾನೇ ಹೊತ್ತುಕೊಂಡು ಬಂದು ವರಾಹದೇವರ ಬಳಿ ಹೋಗಿ ಅವರ ಅಪ್ಪಣೆಯನ್ನು ಪಡೆದು ಕುಲದೇವತೆಯನ್ನು ವರಾಹದೇವರ ಸನ್ನಿಧಾನದಲ್ಲೇ ಪ್ರತಿಷ್ಠೆ ಮಾಡಿ ತನ್ನ ಸ್ಥಾನಕ್ಕೆ ಹಿಂದಿರುಗಿದನು

## ಮದುವೆಗಾಗಿ ಸಾಲ

ವಿವಾಹಕ್ಕೆ ಮೊದಲು ಮಾಡುವ ಕಾರ್ಯಗಳನ್ನೆಲ್ಲಾ ಸಾಂಗೋಪಾಂಗವಾಗಿ ನಡೆಸಿದ ನಂತರ ಶ್ರೀನಿವಾಸನು ಚಿಂತಾಕ್ರಾಂತನಾದನು. ಅವನ ಬಳಿ ಒಂದು ದುಡ್ಡೂ ಇಲ್ಲವೆಂಬ ನಾಟಕವಾಡತೊಡಗಿದನು. ಆಗ ಕುಬೇರನಿಂದ ಸಾಲ ಪಡೆಯಬೇಕೆಂಬ ಸೂಚನೆ ಬಂದಿತು.

ಶ್ರೀನಿವಾಸನು ಬ್ರಹ್ಮನನ್ನೂ, ಕುಬೇರನನ್ನೂ ಕರೆದು ಈ ವಿಷಯ ಪ್ರಸ್ತಾಪಿಸಿದನು. ಆಗ ಕುಬೇರನು ನೀನು ಸಾಲವನ್ನು ಕೇಳಬೇಕೇ ಮಹಾನುಭಾವ ನೀನು ಕೊಟ್ಟ ಸಂಪತ್ತೇ ನನ್ನ ಬಳಿ ಇರುವುದು. ಅದನ್ನು ರಕ್ಷಿಸುವ ಕೆಲಸವನ್ನು ಮಾತ್ರ ಮಾಡುತ್ತಿದ್ದೇನೆ. ನೀನು ಎಷ್ಟಾದರೂ ಬಳಸಿಕೋ''.

ಶ್ರೀನಿವಾಸನು ಅದನ್ನೊಪ್ಪಲಿಲ್ಲ. ಮದುವೆಗೆ ಅಪಾರ ದ್ರವ್ಯಬೇಕಾಗಿರುವುದರಿಂದ ಕುಬೇರನು ಸಾಲವಾಗಿಯೇ ಕೊಡಬೇಕೆಂದು ಹೇಳಿ ಕುಬೇರನಿಗೆ ಸಾಲದ ಪತ್ರವನ್ನು ಬರೆದುಕೊಟ್ಟು ಹದಿನಾಲ್ಕು ಲಕ್ಷ ರಾಮಟಂಕೀ ವರಹಗಳನ್ನು ಪಡೆದು, ಹೀಗೆ ಪಡೆದ ಹಣವನ್ನು ಕಲಿಯುಗದ ಕೊನೆಯಲ್ಲಿ ಬಡ್ಡಿಸಹಿತ ಹಿಂದಿರುಗಿಸುವೆನೆಂದನು. ಇದಕ್ಕೆ ಸಾಕ್ಷಿಗಳು ಬ್ರಹ್ಮ, ಶಂಕರ ಮತ್ತು ಸ್ವಾಮಿ ಪುಷ್ಕರಿಣೀ ತೀರದಲ್ಲಿರುವ ಅಶ್ವತ್ಥವೃಕ್ಷವೆಂದು ಕರಾರಾಯಿತು.

## ದೇವ-ಬ್ರಾಹ್ಮಣ ಸಮಾರಾಧನೆ

ಶ್ರೀನಿವಾಸನು ಕುಬೇರನಿಂದ ಪಡೆದ ಹಣವನ್ನು ಕುಬೇರನ ಕೈಗೇ ಕೊಟ್ಟು ಅವನೇ ಸಾಮಾನು- ಸರಂಜಾಮುಗಳನ್ನೂ ವಸ್ತ್ರಗಳನ್ನೂ, ಇತರ ವಸ್ತುಗಳನ್ನೂ ಹೇರಳವಾಗಿ ತರಿಸಿ ಕಾರ್ಯವನ್ನು ನಿರ್ವಹಿಸಬೇಕೆಂದನು ಕುಬೇರನು ವಧುವಿಗೆ ಚಿನ್ನದ ಮಾಂಗಲ್ಯ ಸೂತ್ರವನ್ನೂ ಕಾಲುಂಗರಗಳನ್ನೂ ಮಾಡಿಸಿದನು.

ನಂತರ ಶ್ರೀನಿವಾಸನ ಅಗ್ನಿಗೆ ಅಡುಗೆ ಮಾಡಲು ಹೇಳಿದನು. ಅಗ್ನಿಯು ಸ್ವಾಮೀ, ನಿನ್ನ ದಯೆಯಿಂದ ಅಡುಗೆಗೆ ಸಿದ್ಧತೆಯೇನೋ ನಡೆದಿದೆ ಆದರೆ ಪಾತ್ರೆಗಳೇ ಇಲ್ಲವಲ್ಲಾ'' ಎಂದನು ಶ್ರೀನಿವಾಸನು-ಇಷ್ಟು ಜನರಿಗೆ ಅಡುಗೆ ಮಾಡಲು ಯಾವ ಪಾತ್ರೆಗಳು ಸಾಕಾಗುತ್ತವೆ? ನಾನು ಹೇಳಿದಂತೆ ಮಾಡು. ಸ್ವಾಮಿ ಪುಷ್ಕರಿಣಿಯಲ್ಲಿ ಅನ್ನ, ಪಾಪನಾಶಿನಿಯಲ್ಲಿ ತೊವ್ವೆ, ಆಕಾಶಗಂಗೆಯಲ್ಲಿ ಪರಮಾನ ದೇವತೀರ್ಥದಲ್ಲಿ ಪಲ್ಯಗಳು, ತುಂಬುರ ತೀರ್ಥದಲ್ಲಿ ತುಪ್ಪವನ್ನು ತುಂಬಿಟ್ಟುಕೋ. ಕುಮಾರತೀರ್ಥದಲ್ಲಿ ಪಂಚಭಕ್ಷ್ಯಗಳು, ವಾಯುತೀರ್ಥದಲ್ಲಿ ಹುಳಿ, ಚಟ್ನಿ, ಉಪ್ಪಿನಕಾಯಿಗಳು ಬೇರೆ ಬೇರೆ ತೀರ್ಥಗಳಲ್ಲಿ ಇನ್ನೂ ಏನೇನು ಬೇಕೋ ಅದನ್ನೆಲ್ಲಾ ಶೀಘ್ರವಾಗಿ ಮಾಡು'' ಎಂದನು.

ಅಗ್ನಿಯು ಹಾಗೆಯೇ ಮಾಡಿ ಶ್ರೀನಿವಾಸನಿಗೆ ತಿಳಿಸಿದನು. ಶ್ರೀನಿವಾಸನು ಅಲ್ಲಿ ನೆರೆದಿದ್ದ ದೇವತೆಗಳನ್ನೂ, ಋಷಿ-ಮುನಿಗಳನ್ನೂ, ಬ್ರಾಹ್ಮಣರನ್ನೂ ಭೋಜನಕ್ಕೆ ಆಹ್ವಾನಿಸುವಂತೆ ಷಣ್ಮುಖನಿಗೆ ಹೇಳಿದನು. ರುದ್ರನು ಬಂದವರನ್ನೆಲ್ಲಾ ತಾರತಮ್ಯಾನುಸಾರವಾಗಿ ಪಂಕ್ತಿಗಳಲ್ಲಿ ಕೂಡಿಸಿದನು. ಕುಡಿಬಾಳೆಯೆಲೆಗಳನ್ನು ಹಾಕಲಾಯ್ತು. ಪಾಂಡು ತೀರ್ಥದಿಂದ ಶ್ರೀ ಶೈಲದವರೆಗೆ ಪಂಕ್ತಿಯಾಯಿತು.

ಶ್ರೀನಿವಾಸನು ಬ್ರಹ್ಮನಿಗೆ ನೈವೇದ್ಯ ಸಮರ್ಪಣೆ ಮಾಡುವಂತೆ ಹೇಳಿದನು. ಬ್ರಹ್ಮನು ''ನಾನು ಯಾರಿಗೆ ನೈವೇದ್ಯ ಸಮರ್ಪಣೆ ಮಾಡಲಿ ಸರ್ವೋತ್ತಮನಾದ ನೀನೆ ಇಲ್ಲಿ ಉಪಸ್ಥಿತನಾಗಿರುವಾಗ ನಿನಗಿಂತಲೂ ಹೆಚ್ಚಿನವರು ಯಾರಿದ್ದಾರೆ. ಎಂದನು. ಶ್ರೀನಿವಾಸನು ಅಹೋ ಬಲ ನರಸಿಂಹ ಸ್ವಾಮಿಗೆ ನೈವೇದ್ಯ ಮಾಡು ಎಂದನು. ಬ್ರಹ್ಮನು ಹಾಗೆಯೇ ಮಾಡಲು ಶ್ರೀನಿವಾಸನು ಎಲ್ಲರಿಗೂ ನಮಸ್ಕಾರ ಮಾಡಿದನು.

ಇಂದ್ರಾದಿಗಳು ಉಪ್ಪಿನಿಂದ ಹಿಡಿದು ತುಪ್ಪದವರೆಗೆ ಮಾಡಿದ ಅಡುಗೆಯನ್ನೆಲ್ಲಾ ಅಚ್ಚುಕಟ್ಟಾಗಿ ಬಡಿಸಿದರು.

ಎಲ್ಲರೂ ಸಾವಕಾಶವಾಗಿ ಊಟ ಮಾಡಬೇಕೆಂದು ಶ್ರೀನಿವಾಸನು ಪಂಕ್ತಿಯ ಮೇಲೆ ಬಂದು ಬಹಳ ಉಪಚಾರಮಾಡತೊಡಗಿದನು. ಎಲ್ಲರಿಗೂ ಸೊಗಸಾದ ದಿವ್ಯ ದೇವ ಭೋಜನವಾಯಿತು. ಎಲ್ಲರೂ ಸಂತೋಷದಿಂದ ಊಟ ಮಾಡಿದರು. ಶ್ರೀನಿವಾಸನು ಎಲ್ಲರಿಗೂ ದಕ್ಷಿಣೆ, ತಾಂಬೂಲಗಳನ್ನು ಕೊಟ್ಟನು. ಆಮೇಲೆ ಇಂದ್ರಾದಿ ದೇವತೆಗಳೊಡನೆ ತಾನೂ ಭೋಜನ ಮಾಡಿದನು. ಎಲ್ಲರೂ ಅಲ್ಲಲ್ಲಿ ಪವಡಿಸಿದರು. ಶ್ರೀನಿವಾಸನು ಲಕ್ಷ್ಮೀದೇವಿಯೊಡನೆ ಮಲಗಿದನು.

**ದಿಬ್ಬಣ ಹೊರಟಿತು**

ಪಕ್ಷಿಗಳ ಕಲರವದೊಂದಿಗೆ ಬೆಳಗಾಯಿತು. ಶ್ರೀನಿವಾಸನು ಗರುಡನ ಮೂಲಕ ಬ್ರಹ್ಮನನ್ನು ಬರಮಾಡಿಕೊಂಡು ಆಕಾಶರಾಜನ ಪಟ್ಟಣಕ್ಕೆ ಹೋಗಲು ಸಿದ್ಧತೆಗಳನ್ನು ಮಾಡಿಕೊಳ್ಳಬೇಕೆಂದು ಹೇಳಿದನು. ಬ್ರಹ್ಮನು ಎಲ್ಲರಿಗೂ ಈ ವಿಚಾರ ತಿಳಿಸಿ ಪ್ರಯಾಣಕ್ಕೆ ಸಿದ್ಧರಾಗಲು ಹೇಳಿದನು.

ಭೇರಿ, ಮೃದಂಗಗಳು ಭೋರ್ಗರೆದು ಶಬ್ದ ಮಾಡಿದವು. ದೇವತೆಗಳು ತಾವು ತಂದಿದ್ದ ವಾಹನಗಳನ್ನೂ ಪಲ್ಲಕ್ಕಿಗಳನ್ನೂ ಚಿತ್ರ-ವಿಚಿತ್ರವಾಗಿ ಸಿಂಗರಿಸಿದರು. ಆನೆ ಕುದುರೆಗಳು ಸಜ್ಜಾದವು. ಸೈನಿಕರು ಶಸ್ತ್ರಗಳನ್ನು ಹಿಡಿದು ಮುಂದೆ ನಡೆದರು. ಶ್ರೀಹರಿಯ ದಾಸರುಗಳು ಪರಮಾತ್ಮನ ಗಾನಮಾಡುತ್ತಾ, ವೀಣೆಯೇ ಮೊದಲಾದ ತಂತೀವಾದ್ಯಗಳನ್ನು ಬಾರಿಸುತ್ತಾ ನಡೆದರು. ಬ್ರಹ್ಮನು ಶ್ರೀನಿವಾಸನಿಗೆ ಗರುಡಾರೂಢನಾಗುವಂತೆ ಹೇಳಿದನು. ಸ್ವಾಮಿಯು, ಗರುಡವನ್ನೇರಿ ಕುಳಿತನು. ಆದಿಶೇಷನು ಶ್ರೀನಿವಾಸನಿಗೆ ಶ್ವೇತ ಛತ್ರವನ್ನುಹಿಡಿದನು. ವಾಯುದೇವನು ಚಾಮರವನ್ನು ಬೀಸಿದನು. ರಮಾದೇವಿಯು ಬಂಗಾರದ ರಥದಲ್ಲಿ ಕುಳಿತಳು. ಬಕುಳೆಯು ವಿಮಾನವನ್ನು ಹತ್ತಿದಳು. ಭೇರಿ, ಮೃದಂಗ, ದುಂದುಭಿಗಳ ಧ್ವನಿಯು ನಭದವರೆಗೂ ವ್ಯಾಪಿಸಿತು. ನರ್ತಕರು ಮುಂದುಗಡೆ ನರ್ತನ ಮಾಡತೊಡಗಿದರು. ಗಂಧರ್ವರು ಗಾಯನ ಮಾಡುತ್ತಿದ್ದರು ಹೀಗೆ ಬಹಳ ಉತ್ಸಾಹ ಮತ್ತು ಸಂಭ್ರಮಗಳಿಂದ ದಿಬ್ಬಣ ಹೊರಟಿತು.

ಈ ದಿಬ್ಬಣವು ಶೇಷಾಚಲದಿಂದ ನಾರಾಯಣಪುರದವರೆಗೆ ಜನಸಾಂದ್ರತೆಯಿಂದ ಕೂಡಿತ್ತು. ಎಲ್ಲರೂ ಶೇಷಾಚಲವನ್ನು ಇಳಿದರು. ಪದ್ಮತೀರ್ಥದ ಬಳಿ ಬಂದರು. ಹೀಗೆ ಬಂದ ದಿಬ್ಬಣವನ್ನು ಶುಕ ಮಹರ್ಷಿಗಳು ನೋಡಿದರು. ಶ್ರೀನಿವಾಸನನ್ನು ಕಂಡು ತಾವು ಕೃತಕೃತ್ಯನಾದೆನೆಂದು ಹೇಳಿದರು. ಪರಮಾತ್ಮನನ್ನು ನಾನಾ ವಿಧದಿಂದ ಭಜಿಸುತ್ತಾ "ಪರಮಾತ್ಮಾ, ನನ್ನದೊಂದು ಬಿನ್ನಪವನ್ನು ಲಾಲಿಸು ಕಂದ ಮೂಲ ಫಲಗಳಿಂದ ನಿನ್ನನ್ನು ಸತ್ಕರಿಸಬೇಕೆಂದಿದ್ದೇನೆ ದಯಮಾಡು" ಎಂದರು. ಶ್ರೀನಿವಾಸನು ಋಷಿಯೇ ನೋಡು ನನ್ನ ದಿಬ್ಬಣದಲ್ಲಿ ಅಸಂಖ್ಯಾತ ಜನರಿದ್ದಾರೆ. ಆದ್ದರಿಂದ ಆಕಾಶರಾಜನ ಪಟ್ಟಣಕ್ಕೆ ಹೋಗಿಯೇ ಭೋಜನ ಮಾಡುವ ಏರ್ಪಾಟಾಗಿದೆ ಎಂದನು. ಶುಕರು ಹೇಳಿದರು "ಹೌದು ಸ್ವಾಮೀ ನಾನು ದರಿದ್ರ ಅದು ನನಗೆ ತಿಳಿದಿದೆ. ಆದರೂ ಕೂಡಾ ನೀನು ನನ್ನ ಕುಟೀರಕ್ಕೆ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸಿದರೆ ನಾನು ಕೃತಾರ್ಥನಾಗುತ್ತೇನೆ." ಆಗ ಬಕುಳಾದೇವಿಯು ಮಧ್ಯೆ ಮಾತಾಡಿದಳು – ಹೇ ಶ್ರೀನಿವಾಸಾ, ನಿನ್ನ ವಿವಾಹಕಾರ್ಯದಲ್ಲಿ ಶುಕಮುನಿಗಳು ಬೇಕಾದಷ್ಟು ಶ್ರಮಪಟ್ಟಿದ್ದಾರೆ. ಆಕಾಶರಾಜನ ಮನವನ್ನು ಒಡಂಬಡಿಸಿ ಪದ್ಮಾವತಿಯನ್ನು ನಿನಗೆ ವಿವಾಹಮಾಡಿಕೊಡಲು ಸಮ್ಮತಿಸುವಂತೆ ಮಾಡಿದ್ದಾರೆ. ನೀನು ಇವರ ಕರೆಯನ್ನು ಮನ್ನಿಸಲೇ ಬೇಕು ಎಂದಳು. ಶ್ರೀನಿವಾಸನು ಒಪ್ಪಿಕೊಂಡನು.

ಶುಕ ಮಹರ್ಷಿಗಳಿಗೆ ಪರಮಾನಂದವಾಯಿತ್ತು. ಶ್ರೀನಿವಾಸನು ಬಕುಳೆ ಹಾಗೂ ಲಕ್ಷ್ಮೀದೇವಿಯರೊಡನೆ ಅವರ ಕುಟೀರಕ್ಕೆ ಹೋದನು, ಶುಕರು ಅವರೆಲ್ಲರನ್ನೂ ಆದರದಿಂದ ಕೂಡಿಸಿದರು.

ಶುಕರು ಪದ್ಮತೀರ್ಥದಲ್ಲಿ ಸ್ನಾನ ಮಾಡಿಕೊಂಡು ಬಂದು ಉತ್ರಾಣಿಭತ್ತವನ್ನು ತಂದು ಅದನ್ನು ಕುಟ್ಟಿ ಅಕ್ಕಿಯನ್ನು ತೆಗೆದು ಅನ್ನವನ್ನು ಮಾಡಿದರು. ಗುಳ್ಳದ ಕಾಯಿಯ ಗೊಜ್ಜನ್ನು ಮಾಡಿದರು.

ನಂತರ ಶ್ರೀನಿವಾಸನನ್ನು ಎಬ್ಬಿಸಿ ಅವನ ಪಾದಪದ್ಮಗಳನ್ನು ತೊಳೆದು,

ಒರೆಸಿ, ಕಮಲದ ಎಲೆಗಳನ್ನು ತಂದು ಹಾಕಿ, ಅನ್ನವನ್ನೂ ಗೊಜ್ಜನ್ನು ಬಡಿಸಿ ಕೈಗಳನ್ನು ಜೋಡಿಸಿಕೊಂಡು ಭೋಜನ ಮಾಡು ಎಂದು ಕೇಳಿ ಕೊಂಡರು. ಲಕ್ಷ್ಮೀದೇವಿಯೂ ಬಕುಳೆಯೂ ಉಂಡರು.

ಹೀಗೆ ಶ್ರೀನಿವಾಸನು ಒಳಗಡೆ ಕುಳಿತು ಭೋಜನ ಮಾಡುತ್ತಿರುವ ಸಂಗತಿ ಹೊರಗಡೆಯಿದ್ದ ಋಷಿಗಳಿಗೆ ತಿಳಿಯಿತು. ಅವರು ತಮ್ಮನ್ನು ಬಿಟ್ಟು ಶ್ರೀನಿವಾಸನಿಗೆ ಮಾತ್ರ ಭೋಜನ ಮಾಡಿಸಿದ್ದಾರೆಂದು ಕೋಪೋದ್ರಿಕ್ತರಾದರು. ಶ್ರೀನಿವಾಸನು ಇದನ್ನು ತಿಳಿದು ತಾನು ಕುಟೀರದ ಹೊರಗೆ ಬಂದು ನಿಂತು ಒಮ್ಮೆ ತೇಗಿದಾಗ ಅಲ್ಲಿ ನೆರೆದಿದ್ದ ಜನಸಂದಣಿಯೆಲ್ಲಕ್ಕೂ ಷಡ್ರಸೋಪೇತವಾದ ಭೋಜನವನ್ನುಂಡಂತೆ ತೃಪ್ತಿಯಾಯಿತು.

**ಆಕಾಶರಾಜನ ಪಟ್ಟಣವನ್ನು ಸೇರಿದರು**

ಶ್ರೀನಿವಾಸನ ಪರಿವಾರಕ್ಕೆಲ್ಲಾ ಶುಕಾಶ್ರಮದ ಬಳಿ ನಿದ್ರೆಯಾಯಿತು. ಮಾರನೆಯ ದಿನ ನವಮಿ – ಗುರುವಾರ ಬೆಳಿಗ್ಗೆ ಎದ್ದು ಪ್ರಾತಃಕರ್ಮಗಳನ್ನು ತೀರಿಸಿಕೊಂಡು, ಚತುರಂಗಬಲ ಸಮೇತವಾಗಿ ಬ್ರಹ್ಮನ ನೇತೃತ್ವದಲ್ಲಿ ಆಕಾಶರಾಜನ ಪಟ್ಟಣಕ್ಕೆ ಪ್ರಯಾಣ ಮಾಡಿದರು.

ಆ ಪ್ರಯಾಣದಲ್ಲಿ ಭಗವಂತನ ಮುಂದೆ ಗಂಧರ್ವರು ಹಾಡುತ್ತಿದ್ದರು. ನರ್ತಕ ನರ್ತಕಿಯರು ನರ್ತಿಸುತ್ತಿದ್ದರು. ದೇವದುಂದುಭಿಗಳು ಮೊಳಗುತ್ತಿದ್ದುವು. ಋಷಿಗಳು ವೇದ ಪಾರಾಯಣ ಮಾಡುತ್ತಿದ್ದರು. ಸ್ವಾಮಿಯು ದೇವತಾಗಣಗಳಿಂದಲೂ, ಲಕ್ಷ್ಮಿ ಮತ್ತು ಬಕುಳಾದೇವಿ ಯರಿಂದಲೂ ಜತೆಗೂಡಿ ಆಕಾಶರಾಜನ ಪಟ್ಟಣವನ್ನು ಪ್ರವೇಶಿಸಿದನು.

ಆಕಾಶರಾಜನ ಪಟ್ಟಣದಲ್ಲೂ ಜನರು ಸಂಭ್ರಮ ಮತ್ತು ಸಡಗರಗಳಿಂದ ಓಡಾಡುತ್ತಿದ್ದರು. ಸೂರ್ಯನು ಮುಳುಗುವ ಹೊತ್ತಾಯಿತು. ಪುರೋಹಿತರು ಆಕಾಶರಾಜನಿಂದ ಪುಣ್ಯಾಹವಾಚನ ಮತ್ತು ಅಷ್ಟವರ್ಗಗಳನ್ನು ಮಾಡಿಸಿದರು. ಪದ್ಮಾವತಿಗೆ ಅಭ್ಯಂಜನವನ್ನು ಮಾಡಿಸಿ ಅಲಂಕಾರ ಮಾಡಿದರು. ತನ್ನ ಪತ್ನಿಯಾದ ಧರಣೀದೇವಿ ಮತ್ತು ಮಗನಾದ

ವಸುದಾನನ ಜೊತೆಗೆ ಬಂದನು ತೋಂಡಮಾನನೂ, ಪುರೋಹಿತರೂ ಮುಂದೆ ಹೊರಟರು. ಪದ್ಮಾವತಿಯನ್ನು ಭವ್ಯವಾಗಿ ಅಲಂಕರಿಸಿದ ಆನೆಯ ಮೇಲೆ ಕೂಡಿಸಿದರು.

**ಬೀಗರನ್ನು ಎದುರುಗೊಳ್ಳುವಿಕೆ**

ಶ್ರೀನಿವಾಸನು ಪರಿವಾರ ಸಮೇತನಾಗಿ ಹತ್ತಿರದಲ್ಲೇ ಬರುತ್ತಿರುವನೆಂಬ ವರ್ತಮಾನವನ್ನು ಕೇಳಿ ಆಕಾಶರಾಜನು ಇಂದ್ರನನ್ನು ಕರೆಯ ಕಳಿಸಿದನು. ರಾಜನ ಚತುರಂಗ ಸೇನೆ ಮುಂದೆ ಹೊರಟಿತು. ಭೇರಿ ದುಂದುಭಿಗಳು ಮೊಳಗುತ್ತಿದ್ದವು. ಗಾಯಕರು ಶ್ರೀಹರಿಯ ಗುಣಗಳನ್ನು ವರ್ಣಿಸುತ್ತಿದ್ದರು. ಆಕಾಶರಾಜನು ಇಂದ್ರನಸಮೇತವಾಗಿ ಬರುತ್ತಿದ್ದನು. ಆಕಾಶರಾಜ ಮೊದಲು ಗೊಂಡು-ಪಟ್ಟಣದ ಸಮಸ್ತ ಜನಗಳಿಗೆಲ್ಲಾ ಶ್ರೀನಿವಾಸನು ಯಾವಾಗ ಕಂಡೇವೋ ಎಂಬ ಕಾತುರವಿತ್ತು.

ಗರುಡಾರೂಢನಾಗಿ ಬರುತ್ತಿದ್ದ ಪ್ರಭುವನ್ನು ಇಂದ್ರನು ಕಂಡು ಆಕಾಶರಾಜನಿಗೆ ತೋರಿಸಿದನು. ಆಕಾಶ ರಾಜನು ಭಗವಂತನ ಮನ ಮೋಹನಾಕಾರವನ್ನು ಕಂಡು ಅತ್ಯಾನಂದ ಹೊಂದಿದನು. ಶ್ರೀನಿವಾಸ ಹೇಗಿದ್ದನೆಂದರೆ

*ಸುಕುಮಾರಂ ಯುವಾನಂ ಚ ಸುಂದರಂ ಸುಂದರಾನನಮ್*
*ಶ್ರೀನಿವಾಸಂ ಜಗದ್ಯೋನಿಂ ಸಚ್ಚಿದಾನಂದ ವಿಗ್ರಹಮ್*

ಸುಕುಮಾರನಾಗಿದ್ದ, ಸುಂದರನಾಗಿದ್ದ, ಯೌವ್ವನಾವಸ್ಥೆಯಲ್ಲಿದ್ದ, ಜಗತ್ತಿಗೆ ಕಾರಣೀ ಭೂತನಾದ ಸಚ್ಚಿದಾನಂದ ವಿಗ್ರಹನಾಗಿದ್ದನು ಗರುಡನ ಹೆಗಲಿನ ಮೇಲೆ ಕುಳಿತು, ಪ್ರಕಾಶಮಾನವನಾಗಿ ವಿರಾಜಿಸುತ್ತಿದ್ದ ಲಾವಣ್ಯ ಪೂರ್ಣನೂ, ತುಂಬು ಜವ್ವನಿಗನೂ, ಮಂದಸ್ಮಿತ ಮುಖಾರವಿಂದ ಉಳ್ಳವನೂ ಆದ ಶ್ರೀನಿವಾಸನನ್ನು ನೋಡಿ ಆಕಾಶರಾಜನು ಪರಮಾನಂದ ಭರಿತನಾದನು.

ರಾಜನು ತಕ್ಷಣ ರಥದಿಂದಿಳಿದು, ಪದ್ಮಾವತಿಯನ್ನು ಆನೆಯ

ಮೇಲಿಂದ ಇಳಿಸಿಕೊಂಡು ಪತ್ನಿ ಮತ್ತು ಪುತ್ರರೊಡಗೂಡಿ ಶ್ರೀಹರಿಯನ್ನು ಇದಿರುಗೊಳ್ಳಲು ಹೊರಟನು. ಆಕಾಶರಾಜನು ಬಾರಿ ಬಾರಿಗೂ ನಾನು ಧನ್ಯ, ನಾನು ಕೃತ ಕೃತ್ಯಾ ಎಂದು ಹೇಳಿಕೊಳ್ಳುತ್ತಿದ್ದನು

ಆ ಕಡೆಯಿಂದ ನಾರದ ಮಹರ್ಷಿಗಳು ಗಡ್ಡ-ಮೀಸೆಗಳಿಂದ ಕೂಡಿ, ಆಜಾನುಬಾಹುವಾಗಿದ್ದ ಆಕಾಶರಾಜನನ್ನು ಪರಿಚಯಮಾಡಿಸಿದರು. ಶ್ರೀನಿವಾಸನು ಇಂತಹ ರಾಜನೊಡನೆ ಬಂಧುತ್ವ ಮಾಡಿದ ನಾನು ಧನ್ಯನಾದೆನು ಎಂದು ಹೇಳುತ್ತಿರಲು ಆಕಾಶರಾಜನು ಹತ್ತಿರ ಬಂದು ಬಿಟ್ಟನು. ಇಬ್ಬರೂ ನಗರದ್ವಾರದ ಬಳಿ ಸಂಧಿಸಿದರು. ಆಕಾಶರಾಜನು ಶ್ರೀನಿವಾಸನನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ, ಅಮೋಘ ವಸ್ತ್ರಭರಣಗಳನ್ನಿತ್ತನು. ಪದ್ಮಾವತಿಯೂ, ಶ್ರೀನಿವಾಸನೂ ಒಬ್ಬರನ್ನೊಬ್ಬರು ನೋಡಿಕೊಂಡರು. ನಗರದ ಹೆಬ್ಬಾಗಿಲ ಬಳಿ ದುರ್ಗಾದೇವಿಯ ಮಂದಿರವಿತ್ತು. ಶ್ರೀನಿವಾಸನು ಲಕ್ಷ್ಮಿ ಮತ್ತು ಪದ್ಮಾವತಿಯರೊಡಗೂಡಿ ದುರ್ಗಾಮಾತೆಯ ದರ್ಶನ ಮಾಡಿದನು. ಪದ್ಮಾವತಿಯನ್ನು ನನಗೆ ಪತ್ನಿಯನ್ನಾಗಿ ಮಾಡೆಂದು ಕೇಳಿಕೊಂಡನು. ಪದ್ಮಾವತಿಯೂ ಸಹಾ ಶ್ರೀನಿವಾಸನೇ ನನಗೆ ಪತಿಯಾಗಲೆಂದು ಕೇಳಿಕೊಂಡಳು.

ಹತ್ತುಸಾವಿರ ಎಣ್ಣೆಯ ದೀಪಗಳು ಜ್ವಾಜ್ವಲ್ಯ ಮಾನವಾಗಿ ಉರಿಯುತ್ತಿದ್ದುವು. ನಾಗರಿಕರು ವಧೂ-ವರರ ಸುತ್ತಲೂ ಪುಷ್ಪಗಳನ್ನೂ ಮಂತ್ರಾಕ್ಷತೆಯನ್ನೂ, ಅರಳನ್ನೂ ಚೆಲ್ಲುತ್ತಿದ್ದರು. ದಿಬ್ಬಣವು ಆಕಾಶರಾಜನ ಪಟ್ಟಣದೊಳಗೆ ಪ್ರವೇಶ ಮಾಡಿತು.

ಶ್ರೀನಿವಾಸನ ಕಡೆಯವರು ನಗರದ ಅಲಂಕಾರವನ್ನು ನೋಡಿ ಆಶ್ಚರ್ಯಚಕಿತರಾಗುತ್ತಿದ್ದರು. ಎಲ್ಲಿ ನೋಡಿದರೂ ತಳಿರು ತೋರಣಗಳು. ಪ್ರತಿಯೊಂದು ಮನೆಯ ಮುಂದೆ ಚೆನ್ನಾಗಿ ಗುಡಿಸಿ, ಸಾರಿಸಿ, ಚಿತ್ರ ವಿಚಿತ್ರವಾದ ಕಣ್ಮನಗಳನ್ನು ಸೂರೆಗೊಳ್ಳುವ ರಂಗೋಲಿಗಳನ್ನುಹಾಕಿದ್ದಾರೆ. ಅಲ್ಲಲ್ಲಿ ದಿವ್ಯವಾದ ಹಸುರವಾಣಿ ಚಪ್ಪರಗಳು, ಮೂಲೆ ಮೂಲೆಗಳಲ್ಲಿ ಅಡಕೆಯ

ಗೊನೆಗಳನ್ನೂ, ಬಾಳೆಯ ಹಣ್ಣಿನ ಗೊನೆಗಳನ್ನೂ ತೂಗುಬಿಟ್ಟಿದ್ದಾರೆ ಅಲಂಕೃತವಾದ ಮಲ್ಲಿಗೆ ಮಾಲೆಯನ್ನು ಕಂಭಗಳಿಗೆ ಸುತ್ತಿದ್ದಾರೆ. ಮರಕತ ಮಣಿಗಳ ತೋರಣ ದೀಪದ ಬೆಳಕಿಗೆ ಝಗಝಗಿಸುತ್ತಿದೆ ಪ್ರತಿಮನೆಯ ಮುಂದೆಯೂ ಪೂರ್ಣ ಕುಂಭಗಳು ಬಂಗಾರದ ತಟ್ಟೆಗಳಲ್ಲಿ ಆರತಿಯನ್ನು ಹಿಡಿದು ಸುವಾಸಿನಿಯರು ಸಾಲಾಗಿ ನಿಂತಿದ್ದಾರೆ.

ವಧೂ ವರರ ಮೆರವಣಿಗೆ ಸಾಗುತ್ತಿದೆ. ಹಸಿರು ವಾಣಿ ಚಪ್ಪರಗಳ ಬಳಿ ಗಣ್ಯ ವ್ಯಕ್ತಿಗಳು ವಧೂ ವರರಿಗೆ ಹಾರಗಳನ್ನು ಹಾಕಿ, ಗುಚ್ಛಗಳನ್ನರ್ಪಿಸಿ, ಪನ್ನೀರನ್ನು ಹಾಕಿ ಸಂಭ್ರಮದಿಂದ, ಸ್ವಾಗತಿಸುತ್ತಿದ್ದಾರೆ. ನಾನಾ ವಿಧವಾದ ವಾದ್ಯಗಳು ಇಂಪಾಗಿ ಮೊಳಗುತ್ತಿವೆ. ಹೀಗೆ ರಾಜಬೀದಿಗಳನ್ನು ಹಾದು ಮೆರವಣಿಗೆಯು ವಿಶ್ವಕರ್ಮನು ಶ್ರೀನಿವಾಸನಿಗಾಗಿ ನಿರ್ಮಿಸಿದ್ದ ಬಿಡಾರಕ್ಕೆ ಬಂದಿತು. ಶ್ರೀನಿವಾಸನು ಅಲ್ಲಿ ಇಳಿದು ರಮಾದೇವಿಯೊಡನೆ ಒಳಗೆ ಹೋದನು.

ಎಲ್ಲರಿಗೂ ಬಹಳ ಆಯಾಸವಾಗಿತ್ತು. ಶ್ರೀನಿವಾಸನು ತೋಂಡಮಾನನನ್ನು ಕರೆದು – 'ನನ್ನ ಜನರೆಲ್ಲ ಬಹಳ ದಣಿದಿದ್ದಾರೆ. ಅವರಿಗೆಲ್ಲಾ ತುಂಬಾ ಹಸಿವೆಯಾಗಿದೆ. ನಾನೂ, ರಮಾದೇವಿಯೂ, ಬಕುಳಾಮಾತೆಯೂ ತುಂಬ ಹಸಿದಿದ್ದೇವೆ ನೀನು ಅಗ್ನಿಯನ್ನು ಕರೆದುಕೊಂಡು ಹೋಗಿ ಸವಿಯಾದ, ಪಂಚಭಕ್ಷ್ಯಗಳೊಡನೆ ಕೂಡಿದ ಹಬ್ಬದ ಅಡುಗೆಯನ್ನು ಮಾಡಿಸು'' ಎಂದನು.

[illegible] ನಗು ಬಂದಿತು – ಸ್ವಾಮಿ, ನೀನು ನಿತ್ಯತೃಪ್ತ, [illegible] ಹಸಿವೆಯೇ, [illegible] ಎಷ್ಟು ವಿಧವಾಗಿ [illegible] ಮಾಡುತ್ತೀಯೋ ಪ್ರಭೂ. ಅದೆಲ್ಲವೂ ನಿನ್ನ ಭಕ್ತರ ಉದ್ಧಾರಕ್ಕಾಗಿಯೇ ನನ್ನ [illegible] ನಿನಗೆಷ್ಟು ದಯೆ? ಆಗಲಿ [illegible] ಕ್ಷಣ ಭೋಜನ ಸಿದ್ಧವಾಗುವುದು ಎಂದು [illegible] ಅಗ್ನಿಯನ್ನು ಕರೆದುಕೊಂಡು ಹೋದನು.

''ಬಿಸಿಲೂಟವನ್ನು ಮಾಡಿದ ರಂಗ''

ಅಗ್ನಿದೇವನಿಂದ ಮಂಡಿಗೆಯೇ ಮೊದಲಾದ ಸಕಲ ಭಕ್ಷ್ಯಗಳೂ

ತಯಾರಾದುವು. ಆಕಾಶರಾಜನೇ ನಿಂತು ಭೋಜನ ಪದಾರ್ಥಗಳನ್ನು ಶ್ರೀನಿವಾಸನ ಬಿಡಾರಕ್ಕೆ ಹೊರಸಿಕೊಂಡು ಬಂದನು. ಶ್ರೀನಿವಾಸನ ಸಮಸ್ತ ಪರಿವಾರವೂ ಮಡಿಬಟ್ಟೆಗಳನ್ನುಟ್ಟು ಸಾಲು ಸಾಲಾಗಿ ಊಟಕ್ಕೆ ಕುಳಿತಿತು. ಶ್ರೀ ಹರಿಯು ಲಕ್ಷ್ಮೀದೇವಿಯೊಡನೆ ತಾನೂ ಕುಳಿತನು. ಬಕುಳಾ ದೇವಿಯೂ ಭಗವಂತನ ಮಗ್ಗಲಿಗೇ ಕುಳಿತಳು.

ರಸಿಕನಾದ ಶ್ರೀನಿವಾಸನು ಪ್ರಾಕೃತರಾದ ಮಾನವರಂತೆ ಊಟ ಮಾಡತೊಡಗಿದನು. ಮಂಡಿಗೆಯು ಬಂದಿತು. ಸ್ವಾಮಿಯು ಬ್ರಹ್ಮಾದಿಗಳಿಗೆ ಉಪಚಾರ ಮಾಡಿ ಮತ್ತೆ ಅವರಿಗೆ ಹಾಕಿಸುತ್ತಿದ್ದನು. ಲಕ್ಷ್ಮಿಯ ಜೊತೆಯಲ್ಲಿ ಹೋಳಿಗೆಯನ್ನು ಚಪ್ಪರಿಸಿ ತಿಂದನು. ಮನೋಹರವೆಂದರೆ ಶ್ರೀನಿವಾಸನಿಗೆ ತುಂಬಾ ಇಷ್ಟ. ಅದನ್ನೂ ಕೇಳಿ ಹಾಕಿಸಿಕೊಂಡನು. ಹೀಗೆ ತಾನು ತನ್ನ ಪತ್ನಿಯೊಡನೆ ಭವ್ಯವಾದ ಭೋಜನವನ್ನು ಮಾಡಿ ತನ್ನ ಸಮಸ್ತ ಪರಿವಾರದಯೋಗಕ್ಷೇಮವನ್ನೂ ನೋಡಿಕೊಂಡನು. ಬಕುಳಾದೇವಿಯ ಆನಂದ ಹೇಳ ತೀರದು.

ಭೋಜನಾನಂತರ ಆಕಾಶರಾಜನು ಅಳಿಯನಿಗೆ ಉಡುಗೊರೆಗಳನ್ನು ಕೊಟ್ಟು ತಾನು ತನ್ನ ಅರಮನೆಗೆ ಹೋದನು. ಇತ್ತ ಶ್ರೀನಿವಾಸನು ರಮಾದೇವಿಯೊಡನೆ ಬಿಡಾರ ಮಾಡಿದನು.

**ವರಪೂಜೆ**

ಅರುಣೋದಯವಾಯಿತು. ಭಗವಾನ್ ಸೂರ್ಯದೇವನು ಮೆಲ್ಲ ಮೆಲ್ಲನೆ ಪೂರ್ವದಿಶೆಯಲ್ಲಿ ಏರತೊಡಗಿದನು. ಹಕ್ಕಿಗಳು ಚಿಲಿಪಿಲಿಮಾಡಲಾರಂಭಿಸದವು. ಸೂರ್ಯನ ಕಿರಣಗಳು ಉನ್ನತವಾದ ಸೌಧಗಳ ಶಿಬಿರದ ಮೇಲೂ, ಎತ್ತರವಾದ ಮರದ ಎಲೆಗಳ ಮೇಲೂ ಹೊನ್ನೀರನ್ನು ಚಿಮುಕಿಸತೊಡಗಿದವು. ಹಿಂದಿನ ರಾತ್ರಿ ಆಯಾಸಗೊಂಡು ಮಲಗಿದ್ದವರೆಲ್ಲರೂ, ಹಕ್ಕಿಗಳ ಚಿಲಿಪಿಲಿಯನ್ನು ಕೇಳಿ ದಿಗ್ಗನೆ ಎದ್ದರು. ಇತ್ತ ಶ್ರೀನಿವಾಸನ ಬಿಡಾರದಲ್ಲೂ ಅತ್ತ ಅರಮನೆಯಲ್ಲೂ ಸಡಗರವು

ಆರಂಭವಾಯಿತು. ಪುರಜನರೂ ಈ ದಿವ್ಯಮಂಗಳ ಮುಹೂರ್ತವನ್ನು ನೋಡಲಿಕ್ಕಾಗಿ, ಬೆಳಗಿನ ಝಾವಕ್ಕೆ ಎದ್ದು, ನಿತ್ಯಕರ್ಮಗಳನ್ನು ತೀರಿಸಿಕೊಂಡು, ಭಗವಂತನನ್ನು ಸ್ಮರಿಸುತ್ತಾ, ಚೆನ್ನಾಗಿಸಿಂಗರಿಸಿಕೊಂಡು ಅರಮನೆಯ ಕಡೆ ಹೊರಟರು. ಸುವಾಸಿನಿಯರ ಸಡಗರವನ್ನಂತೂ ಹೇಳಲಿಕ್ಕೆ ಬಾರದು.

ಶ್ರೀನಿವಾಸನು ರಮಾದೇವಿಯೊಡನೆ ಮಂಗಳ ಸ್ನಾನವನ್ನು ಮಾಡಿ ಸಿದ್ಧನಾಗಿ ವಶಿಷ್ಠರನ್ನು ಬರಮಾಡಿಕೊಂಡು ನಮ್ಮ ಕಡೆ ನಾನು, ಲಕ್ಷ್ಮೀದೇವಿ, ಬಕುಳಾದೇವಿ, ಬ್ರಹ್ಮದೇವರು ಮತ್ತು ತಾವು ಹೀಗೆ ಐದು ಜನ ಉಪವಾಸವಿರಬೇಕು. ಆ ಕಡೆ ಆಕಾಶರಾಜ, ಧರಣೀದೇವಿ, ಪದ್ಮಾವತಿ, ವಸುದಾನ ಮತ್ತು ಅವರ ಪುರೋಹಿತರು, ಇವರು ಐದು ಜನ ಉಪವಾಸವಿರಬೇಕು ಮಿಕ್ಕೆಲ್ಲರಿಗೂ ಭೂರಿ ಭೋಜನವಾಗಬೇಕು. ಇದನ್ನೆಲ್ಲಾ ಆಕಾಶ ರಾಜನಿಗೆ ತಿಳಿಸಿ, ನೀವು ಎಲ್ಲಾ ಏರ್ಪಾಟನ್ನೂ ಮಾಡಿ ಎಂದು ಹೇಳಿ ಕಳಿಸಿದನು. ಎಲ್ಲವೂ ಶ್ರೀನಿವಾಸನ ಇಚ್ಛೆಯಂತೆಯೇ ನಡೆಯಿತು.

ಸಂಜೆಯಾಯಿತು ಜನಗಳೆಲ್ಲಾ ಸಂಭ್ರಮ-ಉತ್ಸಾಹಗಳು ತುಂಬಿ ತುಳುಕುತ್ತಿದ್ದವು. ಆಕಾಶರಾಜನ ಅರಮನೆಯು ಇಂದ್ರ ಸಭೆಯಂತೆ ಶೃಂಗಾರಗೊಂಡಿತ್ತು. ವಿವಾಹಮಂಟಪದ ಸೊಬಗಂತೂ ಕಣ್ಮನಗಳಿಗೆ ಆನಂದವನ್ನುಂಟು ಮಾಡುತ್ತಿತ್ತು. ಮದುವಣಿಗನಾದ ಶ್ರೀನಿವಾಸನನ್ನು ಕರೆತರಲು ಇಂದ್ರನ ಐರಾವತವು ಸಜ್ಜುಗೊಂಡು ನಿಂತಿತ್ತು. ಅದರ ಬೆನ್ನಿನ ಮೇಲೆ ನವರತ್ನ ಖಚಿತವಾದ ಪಟ್ಟೆ ಪಿತಾಂಬರವು ಶೋಭಿಸುತ್ತಿತ್ತು ನಾಲ್ಕು ದಂತಗಳುಳ್ಳ ಆ ಐರಾವತದ ಕಿವಿಗಳಿಗೆ ನವರತ್ನಗಳ ಹಿಡಿಯುಳ್ಳ ಮೃದುವಾದ ಚಾಮರಗಳನ್ನು ಕಟ್ಟಲಾಗಿತ್ತು. ಕೊರಳಿನಲ್ಲಿ ಚಿನ್ನದ ಸುಮಧುರನಾದದ ಕಿರುಗಂಟೆಗಳು ಕಟ್ಟಲ್ಪಟ್ಟಿದ್ದುವು.

ಆಕಾಶರಾಜನು ತನ್ನ ಪತ್ನಿಯಾದ ಧರಣೀ ದೇವಿ, ಮಗ ವಸುದಾನ, ತಮ್ಮ ತೋಂಡಮಾನ, ಪುರೋಹಿತರು ಮತ್ತು ಬಂಧು ಬಾಂಧವರು ಹಾಗೂ ಇಷ್ಟಮಿತ್ರರು ಮತ್ತು ರಾಜ ಪರಿವಾರದೊಂದಿಗೆ ಅಳಿಯನ ಬಿಡಾರದ ಕಡೆ ಹೊರಟನು. ಮುಂದೆ ಚತುರಂಗ ಬಲವಿತ್ತು ಮಂಗಳ ವಾದ್ಯಗಳು ಮೊಳಗುತ್ತಿದ್ದುವು. ಸುವಾಸಿನಿಯರು ರತ್ನಾ ಭರಣಗಳನ್ನು ತೊಟ್ಟು, ಜರಿಯ ಸೀರೆಗಳನ್ನುಟ್ಟು, ಕೈಗಳಲ್ಲಿ ಅರಿಶಿನ ಕುಂಕುಮ, ಮಂತ್ರಾಕ್ಷತೆ ಹಾಗೂ ಹೂವುಗಳನ್ನು ತುಂಬಿದ್ದ ಭಂಗಾರದ ತಟ್ಟೆಗಳನ್ನು ಹಿಡಿದು, ಮಣಿಮಯವಾದ ತಟ್ಟೆಗಳಲ್ಲಿ ಆರತಿಯನ್ನು ಹಿಡಿದು ಹೊರಟಿದ್ದರು.

ವರನ ಬಿಡಾರದ ಸಭಾಭವನದಲ್ಲಿ ಸಮಸ್ತ ದೇವತೆಗಳೂ, ಬ್ರಾಹ್ಮಣರೂ, ಋಷಿ ಮುನಿಗಳೂ, ಮಹಿಳೆಯರೂ ನೆರೆದಿದ್ದರು.

ಆಕಾಶರಾಜನು ತನ್ನ ಪರಿವಾರದೊಡನೆ ಸಭಾಭವನವನ್ನು ಹೊಕ್ಕೊಡನೆಯೇ ಶ್ರೀನಿವಾಸನು ಬಹಳ ಗೌರವದಿಂದ ಎದ್ದು ನಿಂತು ರಾಜನಿಗೆ ಸ್ವಾಗತ ಕೋರಿ ಅವನನ್ನು ಆಲಂಗಿಸಿದನು. ನಂತರ ಹೇಳಿದನು – ರಾಜನ್ ನೀವು ಹಿರಿಯರು, ವಯಸ್ಕರಾಗಿದ್ದೀರಿ. ನನ್ನನ್ನು ಕರೆಯಲು ನೀವು ವಸುದಾನನನ್ನು ಕಳಿಸಿದ್ದರೆ ಸಾಕಾಗಿತ್ತು. ನೀವೇಕೆ ತೊಂದರೆ ತೆಗೆದುಕೊಂಡಿರಿ? ರಾಜನ ಕಣ್ಣುಗಳಿಂದ ಶ್ರೀನಿವಾಸನ ಈ ವಿನಯವನ್ನು ನೋಡಿ ಆನಂದ ಭಾಷ್ಪಗಳು ದುರಿದುವು.

**ಆಕಾಶರಾಜನು ವರಪೂಜೆಯನ್ನು ಮಾಡಲು ಸಿದ್ಧನಾದನು. ಧರಣೀದೇವಿಯು ಅರುಂಧತಿಯನ್ನು ಮುಂದಿಟ್ಟುಕೊಂಡು ಸಿದ್ಧಳಾದಳು. ಶ್ರೀನಿವಾಸನ ಸುಂದರವಾದ ಮುಖ ಕಮಲವನ್ನು ನೋಡಿದ ಧರಣೀದೇವಿ** ಇಂತಹ ಅಳಿಯನನ್ನು ಪಡೆಯಲು ನಾನೆಷ್ಟು ಸುಕೃತವನ್ನು ಮಾಡಿರುವೆನೋ ಎಂದುಕೊಂಡಳು.

ನಂತರ ಗಂಡ ಹೆಂಡಿರಿಬ್ಬರೂ ಶ್ರೀನಿವಾಸನಿಗೆ ಕುಂಕುಮ ತಿಲುಕವಿಟ್ಟು,

ಸುಗಂಧ ದ್ರವ್ಯಗಳನ್ನು ಪೂಸಿ ಪೂಜೆಮಾಡಿದರು. ಬಗೆ ಬಗೆಯ ಬೆಲೆಬಾಳುವ ವಸ್ತ್ರಗಳನ್ನೂ, ಆ ಭರಣಗಳನ್ನೂ ಕೊಟ್ಟರು.

ಶ್ರೀನಿವಾಸನು ಆಕಾಶರಾಜನ ಪ್ರಾರ್ಥನೆಯಂತೆ ಐರಾವತವನ್ನೇರಿದನು. ಬ್ರಹ್ಮ, ವಾಯು ದೇವರೇ ಮೊದಲಾಗಿ ವರನ ಕಡೆಯವರೆಲ್ಲರೂ ಪಟ್ಟೆಪೀತಾಂಬರಗಳನ್ನು ಧರಿಸಿ, ಹಾರ-ಕೇಯೂರಾದಿಗಳಿಂದ ಅಲಂಕೃತರಾಗಿ ವರನ ಹಿಂದೆ ಹೊರಟರು. ಹಾಗೆಯೇ ಸ್ತ್ರೀಯರೂ ಸಹಾ ಅಲಂಕಾರಗಳನ್ನು ಮಾಡಿಕೊಂಡು ಹೊರಟರು. ನಗಾರಿ-ನೌಬತ್ತುಗಳು ಮೊಳಗುತ್ತಿದ್ದವು. ದೀಪಗಳು ಝಗಝಗಿಸುತ್ತಿದ್ದುವು.

ಮೆರವಣಿಗೆಯು ಅರಮನೆಯ ಬಾಗಿಲಿಗೆ ಬಂದಿತು. ಒಡನೆಯೇ ತೋಂಡಮಾನನ ಪತ್ನಿಯು ಆರತಿಯನ್ನು ಬೆಳಗಿದಳು.

ವಿವಾಹ ಸಂಭ್ರಮ

ಮಯನಿಂದ ನಿರ್ಮಿತವಾದ ಸುಂದರವೂ ಭವ್ಯವೂ ಆದ ವಿವಾಹಮಂಟಪವನ್ನು ಪ್ರವೇಶಿಸಿ ರತ್ನದಿಂದ ಮಾಡಿದ ಹಸೆಮಣೆಯ ಮೇಲೆ ಶ್ರೀನಿವಾಸನು ಕುಳಿತನು. ಅವನ ಪರಿವಾರವೆಲ್ಲಾ ಅವರವರಿಗೆ ಏರ್ಪಡಿಸಿದ್ದ ಉನ್ನತಾಸನಗಳಲ್ಲಿ ಕುಳಿತರು.

ಆಕಾಶರಾಜನು ಪುರೋಹಿತರಿಂದ ಸ್ವಾಮಿ ಪುಷ್ಕರಿಣಿ ಜಲವನ್ನು ಬಂಗಾರದ ಕೊಡಗಳಲ್ಲಿ ತಂದಿರಿಸಿಕೊಂಡಿದ್ದನು. ಧರಣೀದೇವಿಯು ಶ್ರೀನಿವಾಸನ ಪಾದ ಪದ್ಮಗಳಿಗೆ ಸ್ವಾಮಿ ಪುಷ್ಕರಿಣೀ ಜಲವನ್ನೆರೆದಳು. ಆಕಾಶರಾಜನು ಸ್ವಾಮಿಯ ಎರಡೂ ಪಾದಗಳನ್ನು ಭಕ್ತಿ ಪುರಸ್ಸರವಾಗಿ ತೊಳೆದನು. ಧರಣೀ ದೇವಿಯು ಪಾದ ಪೂಜೆ ಮಾಡಿದಳು. ಆ ಪಾದೋದಕವನ್ನು ಆಕಾಶರಾಜನು ತನ್ನ ತಲೆಯ ಮೇಲೆ ಭಕ್ತಿಯಿಂದ ಪ್ರೋಕ್ಷಿಸಿಕೊಂಡನು. ನಂತರ ಧರಣೀದೇವಿಯ ತಲೆಯ ಮೇಲೂ

ವಸುದಾನನ ತಲೆಯ ಮೇಲೂ ಪ್ರೋಕ್ಷಿಸಿದನು. ಶ್ರೀನಿವಾಸನಿಗೆ ಗಂಧ - ಪುಷ್ಪಗಳನ್ನು ಕೊಟ್ಟು, ವಸ್ತ್ರಾದಿಗಳನ್ನು ಕೊಟ್ಟನು.

ಇತ್ತ ಅಂತಃಪುರದಲ್ಲಿ ಪದ್ಮಾವತಿಗೆ ಪೀತಾಂಬರವನ್ನುಡಿಸಿ, ಆಭರಣಗಳನ್ನು ತೊಡಿಸಿ, ಹೆರಳಿಗೆ ನಾನಾ ಬಗೆಯ ಪುಷ್ಪಗಳನ್ನು ಮುಡಿಸಿ ಅಲಂಕಾರ ಮಾಡಿದ್ದರು. ಆಕೆಯು ಶ್ರೀ ಹರಿಧ್ಯಾನಪರಾಯಣಳಾಗಿ ಕುಳಿತಿದ್ದಳು.

ವಿವಾಹ ಮುಹೂರ್ತವು ಸನ್ನಿಹಿತವಾಯಿತು. ಘಂಟಾನಾದವಾಯಿತು. ವಧುವನ್ನು ಕರೆದು ತರಲು ಪುರೋಹಿತರು ಹೇಳಿದರು. ಆಕೆಯ ಸೋದರ ಮಾವನ ತೋಂಡಮಾನ ಮತ್ತು, ವಸುದಾನರೊಂದಿಗೆ ಕನ್ಯೆಯನ್ನು ವಿವಾಹಮಂಟಪಕ್ಕೆ ಕರೆತಂದನು.

ಮೊದಲೇ ವಿಶ್ವಕರ್ಮನಿಂದ ವಿರಚಿತವಾದ ಸಭಾ ಮಂಟಪ ದಿವ್ಯವಾಗಿ ಅಲಂಕೃತಗೊಂಡಿದೆ. ಬ್ರಾಹ್ಮಣರು ವೇದಘೋಷವನ್ನು ಮಾಡುತ್ತಿದ್ದಾರೆ. ಸುಮಂಗಲಿಯರು ಸುಶ್ರಾವ್ಯವಾಗಿ ಹಾಡುತ್ತಿದ್ದಾರೆ. ಮಂಗಳ ವಾದ್ಯಗಳು ಮೊಳಗುತ್ತಿದೆ. ಪೂರ್ವ ಮತ್ತು ಪಶ್ಚಿಮದ ಕಡೆ ಎರಡು ಅಕ್ಕಿಯ ರಾಶಿಗಳನ್ನು ಹಾಕಿದ್ದಾರೆ. ಪಶ್ಚಿಮರಾಶಿಯ ಮೇಲೆ ಸ್ವಾಮಿ ನಿಂತಿದ್ದಾನೆ. ಅವನು ಪೂರ್ವದ ಕಡೆ ಮುಖ ಮಾಡಿದ್ದಾನೆ. ಪದ್ಮಾವತಿಯು ಅವನಿಗೆದುರಾಗಿ ಪಶ್ಚಿಮದ ಕಡೆ ಮುಖಮಾಡಿ ನಿಂತಿದ್ದಾಳೆ. ಪುರೋಹಿತರು ವಧೂವರರ ಕೈಯಲ್ಲಿ ಜೀರಿಗೆ-ಬೆಲ್ಲವನ್ನು ಕೊಟ್ಟಿದ್ದಾರೆ ಬೃಹಸ್ಪತಿ ಮತ್ತು ವಶಿಷ್ಠರು ಅವರ ಮಧ್ಯೆ ಅಂತಃಪಟವನ್ನು ಹಿಡಿದಿದ್ದಾರೆ. ಅವರು ಮಧುರವಾಗಿ ''ಶುಭಲಗ್ನಾಸಾವಧಾನ ಸುಮೂಹರ್ತ ಸಾವಧಾನ ಲಕ್ಷ್ಮೀನಾರಾಯಣ ಧ್ಯಾನಾ ಸಾವಧಾನ ಎಂದು ಸುಮೂಹರ್ತವು ಸನ್ನಿಹಿತವಾಗಿದೆ. ಎಲ್ಲರೂ ಎಚ್ಚರಿಕೆಯಿಂದ ನೋಡುತ್ತಿರಿ'' ಎಂದು ಹೇಳುತ್ತಿದ್ದಾರೆ. ಅಲ್ಲಿ ನೆರೆದಿದ್ದ ದೇವತೆಗಳೂ, ಋಷಿಗಳೂ, ವಿಪ್ರರೂ ಮಂಗಳಾಷ್ಟಕವನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದಾರೆ.

*ತದೇವಲಗ್ನಂ ಸುದಿನಂತ ದೇವ*
*ತಾರಾಬಲಂ ಚಂದ್ರಬಲಂತ ದೇವ।*
*ವಿದ್ಯಾಬಲಂ ದೈವಬಲಂ ತದೇವ*
*ಲಕ್ಷ್ಮೀಪತೇ ತೇಂಘ್ರಿಯುಗಂಸ್ಮರಾಮಿ ॥*

*ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂಧನಃ*
*ಮಂಗಲಂ ದೇವಕೀ ಪುತ್ರೋ ಮಂಗಲಂ ಗರುಡ ಧ್ವಜಃ*

ಎಂದು ಹೇಳುತ್ತಾ – ಪುಣ್ಯಾಗಳಿಗೆ ಬಂದಿತು. ವಧೂ–ವರರ ಕೈಯಲ್ಲಿ ಜೀರಿಗೆ ಬೆಲ್ಲವಿದೆ. ಮಂಗಳಾಷ್ಟಕವನ್ನು ಹೇಳುತ್ತಾ ಪುರೋಹಿತರು ಅಂತರ್ ಪಠವನ್ನು ತೆಗೆದ ಕೂಡಲೇ ವಧೂವರರು ಪರಸ್ಪರರ ತಲೆಯ ಮೇಲೆ ಜೀರಿಗೆ ಬೆಲ್ಲವನ್ನು ಹಾಕಿದರು. ದೇವ ದುಂದುಭಿಗಳು ಮೊಲಗಿದುವು. ಸುರರು ಪುಷ್ಪ ವೃಷ್ಟಿಯನ್ನು ಮಾಡಿದರು.

ಪುರೋಹಿತರು ವಧೂವರರಗೋತ್ರವನ್ನು ಉಚ್ಚರಿಸಿದರು. ಬೃಹಸ್ಪತಿಗಳು ಕನ್ಯೆಯ ಪ್ರವರಗೋತ್ರಗಳನ್ನು ಹೇಳಿದರು.

*''ಅತಿಗೋತ್ರ ಸಮುದ್ಭೂತಾಂ ಸುವೀರಾಸ್ಯ ಪ್ರಪೌತ್ರಿಕಾಮ್*
*ಸುಧರ್ಮಣಶ್ಚ ಪೌತ್ರಿಂ ತಾಂ ಪುತ್ರೀ ಮಾಕಾಶಭೂಪತೇ*
*ತ್ವಮಂಗೀಕುರು ಗೋವಿಂದ ಕನ್ಯಾಂ ಕಮಲ ಲೋಚನಾಮ್''*

ವಶಿಷ್ಠರು ವರನ ಪ್ರವರಗೋತ್ರಗಳನ್ನು ಹೇಳಿದರು–

*''ಪ್ರಪೌತ್ರಸ್ಯ ಯಯಾತೇಶ್ಚ ಪೌತ್ರಸ್ಯಾಮಿತ ತೇಜಸಃ*
*ಶೂರಸೇನಸ್ಯ ರಾಜೇಂದ್ರ ವಸುದೇವಸ್ಯ ಭೂಪತೇ*
*ಪುತ್ರಸ್ಯ ವೇಂಕಟೇಶಸ್ಯ ಗೋತ್ರೇ ವಾಸಿಷ್ಠ ಸಂಜ್ಞಾಕೇ।*
*ಜಾತಸ್ಯಾತ್ರಿಕುಲೋತ್ಪನ್ನಾಂ ಕನ್ಯಾಂ ಕನಕ ಭೂಷಿತಾಂ*
*ಗ್ರಹೀಷ್ಯಾಮೋ ವಯಂ ರಾಜನ್ ತವಪುತ್ರೀಂ ನೃಪೋತ್ತಮ ॥*

ಗೋತ್ರೋಚ್ಚಾರಣೆಯ ನಂತರ ಮಹಾಮಹಿಮನಾದ ಆಕಾಶರಾಜನು ತನ್ನ ಕನ್ಯೆಯನ್ನು ಪರಿಗ್ರಹಿಸಬೇಕೆಂದು ಶ್ರೀನಿವಾಸನನ್ನು ಕೇಳಿಕೊಂಡನು

ಧರಣೀದೇವಿಯು ಬಂಗಾರದ ಕೊಡದಲ್ಲಿದ್ದ ಸ್ವಾಮಿ ಪುಷ್ಕರಿಣಿ ಜಲವನ್ನು ಶ್ರೀನಿವಾಸನ ಬಲಗೈಯಲ್ಲಿ ಬಿಟ್ಟಳು. ಆಕಾಶರಾಜನು ಪದ್ಮಾವತಿಯನ್ನು ಶ್ರೀನಿವಾಸನ ಬಲಗಡೆ ಕೂಡಿಸಿದನು. ಎಲ್ಲರ ಕೈಯಲ್ಲೂ ಮುತ್ತು - ರತ್ನಗಳಿಂದ ಕೂಡಿದ ಮಂತ್ರಾಕ್ಷತೆಯನ್ನು ಕೊಟ್ಟಿದ್ದರು. ಎಲ್ಲರೂ ವಧೂವರರ ತಲೆಯ ಮೇಲೆ ಮಂತ್ರಾಕ್ಷತೆಗಳನ್ನು ಹಾಕಿದರು. ಆಕಾಶರಾಜನು ಮಂತ್ರ ಪೂರಿತವಾದ ಮಾಂಗಲ್ಯ ಸೂತ್ರವನ್ನು ಅರಿಶಿನ ಕುಂಕುಮಗಳಿಂದ ಪೂಜಿಸಿ ದೇವತೆಗಳ, ಋಷಿಗಳ ಹಾಗೂ ವೇದಾಧ್ಯಯನ ಸಂಪನ್ನರಾದ ವಿಪ್ರರ ಮತ್ತು ಸುವಾಸಿನಿಯರ ಕೈಯಲ್ಲಿ ಮುಟ್ಟಿಸಿ ಶ್ರೀನಿವಾಸನ ಕೈಯಲ್ಲಿಕೊಟ್ಟನು. ಶ್ರೀನಿವಾಸನು ಅದನ್ನು ಕೈಯಲ್ಲಿ ತೆಗೆದುಕೊಂಡು, ಮಂಗಳ ವಾದ್ಯಗಳು ಮೊಳಗುತ್ತಿರಲು -

*"ಮಾಂಗಲ್ಯಂತಂತುನಾನೇನ ಜಗಜ್ಜೀವನ ಹೇತುನಾ।*
*ಕಂಠೇ ಬಧ್ನಾಮಿಸುಭಗೇ ಚಿರಂಜೀವ ಮಯಾ ಸಹ ॥*

ಎಂದು ಹೇಳಿ ಪದ್ಮಾವತಿಯ ಕಂಠದಲ್ಲಿ ಸ್ಥಾಪನೆ ಮಾಡಿದನು. ರಾಜನು ಶ್ರೀನಿವಾಸನಿಗೆ ಮಧುಪರ್ಕವನ್ನು ಕೊಟ್ಟನು. ಆನಂತರ ಕಂಕಣ ಬಂಧನವು ನಡೆಯಿತು.

ವಿವಾಹ ಮಹೋತ್ಸವವು ಭಾರೀ ವಿಜೃಂಭಣೆಯಿಂದ ನಡೆಯಿತು. ಆಕಾಶರಾಜನು ಅಳಿಯನಿಗೆ. ಬೆಲೆಬಾಳುವ ಬಹುವಸ್ತುಗಲನ್ನು ಬಳುವಳಿಯಾಗಿಕೊಟ್ಟನು. ವಿವಾಹದಲ್ಲಿ ಪಾಲ್ಗೊಂಡ ಪ್ರತಿಯೊಬ್ಬರಿಗೂ ಫಲ-ತಾಂಬೂಲ-ದಕ್ಷಿಣೆಗಳನ್ನು ಕೊಡಲಾಯಿತು. ಸುವಾಸಿನಿಯರಿಗೆ ಹರಿದ್ರಾ ಕುಂಕುಮ, ಹೂಮಾಲೆ, ಬಳೆಗಳು ಹಾಗೂ ಕುಬುಸದ ಖಣಗಳನ್ನು ಧರಣೀ ದೇವಿಯು ಕೊಟ್ಟಳು. ಆಕಾಶರಾಜನು ಬ್ರಾಹ್ಮಣರಿಗೆ ಗೋವುಗಳನ್ನೂ, ಕುದುರೆಗಳನ್ನೂ, ವಸ್ತ್ರಗಳನ್ನೂ ಕೊಟ್ಟನು. ಸರ್ವರೂ ಆನಂದ ಭರಿತರಾದರು.

ನಂತರ ಲಾಜಾಹೋಮ ಸಪ್ತಪದಿಗಳು ನಡೆದವು. ಆಗಲೂ ಆಕಾಶರಾಜನು ಬ್ರಹ್ಮಚಾರಿಗಳಿಗೂ ಬ್ರಾಹ್ಮಣರಿಗೂ ಯಥೇಚ್ಛವಾಗಿ ದಕ್ಷಿಣೆ ತಾಂಬೂಲಗಳನ್ನು ಕೊಟ್ಟನು.

## ಬೀಗರ ಭೋಜನ ಮತ್ತು ಹರಿಭೂಮ

ಬೀಗರ ಭೋಜನದ ಸಂಭ್ರಮವೇ ಸಂಭ್ರಮ. ದೇವತೆಗಳಿಗೂ, ಋಷಿಗಳಿಗೂ, ಬ್ರಾಹ್ಮಣ ಸುವಾಸಿನಿಯರಿಗೂ ಪ್ರತ್ಯೇಕ ಪಂಕ್ತಿಗಳನ್ನು ಮಾಡಿ ದೊಡ್ಡ ದೊಡ್ಡ ಅಗ್ರದ ಬಾಳೆಲೆಗಳನ್ನು ಹಾಕಿ, ಚಿತ್ರವಿಚಿತ್ರಚಿತ್ತಾರದ ರಂಗೋಲಿಗಳನ್ನು ಬಿಡಿಸಿ, ಷಡ್ರಸೋಪೇತವಾದ ಭೋಜನವನ್ನು ಬಡಿಸಲಾಯಿತು. ಬೀಗರು ಒಬ್ಬರಿಗೊಬ್ಬರು ಪರಿಹಾಸ್ಯ ಮಾಡಿಕೊಳ್ಳುತ್ತಾ ಭೋಜನವನ್ನು ಮಾಡಿದರು.

ಅತ್ತ ಕಡೆ ಹರಿಭೂಮಕ್ಕೆ ಸಿದ್ಧವಾಯಿತು. ಭೂಮದ ಎಲೆಗಳ ಮುಂದೆ ಸುಂದರವಾದ ರಂಗೋಲಿಗಳನ್ನು ರಚಿಸಿ, ಆ ಕಡೆ- ಈಕಡೆ ಎತ್ತರದ ದೀವಿಗೆಗಳಲ್ಲಿ ತುಪ್ಪದಲ್ಲಿ ತೊಯ್ಸಿದ ಬತ್ತಿಗಳನ್ನು ಬೆಳಗಿ, ವಧೂ-ವರರನ್ನು ಹಸೆಮಣೆಗಳ ಮೇಲೆ ಕೂರಿಸಿದರು ಭಗವಂತನು ಭಕ್ತಜನರಿಗೆ ಆನಂದವನ್ನೀಯಲು ಪದ್ಮಾವತಿಯೊಡನೆ ಕುಳಿತು ಸರಸ-ಸಲ್ಲಾಪಗಳಿಂದ ಭೋಜನ ಮಾಡಿದನು. ಧರಣೀ ದೇವಿಯು ಬಕುಳಾದೇವಿ ಮತ್ತು ರಮಾದೇವಿಯರೊಡನೆ ಭೋಜನಕ್ಕೆ ಕುಳಿತಳು. ಆಕಾಶರಾಜನು ಶ್ರೀನಿವಾಸನ ಬಳಿ ಕುಳಿತು ಭೋಜನ ಮಾಡಿದನು.

ಭೋಜನಾನಂತರ ವಶಿಷ್ಠಾದಿ ಮಹರ್ಷಿಗಳು ಆಶೀರ್ವಾದ ಮಾಡಿದರು.

ಸ್ವಲ್ಪ ವಿಶ್ರಮಿಸಿಕೊಂಡಾದ ಮೇಲೆ ಧರಣೀದೇವಿಯು ಉರುಟಣೆಗೆ ಸಿದ್ಧ ಮಾಡಿದಳು. ಸುವಾಸಿನಿಯರಿಗೆ ಸಂಭ್ರಮವೋ ಸಂಭ್ರಮ. ಶ್ರೀನಿವಾಸ ಪದ್ಮಾವತಿಯರ ಉರುಟಣೆ ನೋಡಲು ಎಲ್ಲರೂ ಸೇರಿದರು. ಬಹಳ ಸಂಭ್ರಮದಿಂದ ಉರುಟಣೆ ಶಾಸ್ತ್ರ ನಡೆಯಿತು. ಉರುಟಣೆಯ ನಂತರ ಶ್ರೀನಿವಾಸ ಪದ್ಮಾವತಿಯರಿಗೆ ಕರ್ಪೂರದಾರತಿಯನ್ನೆತ್ತಿದರು.

ಆರತಿಯು ಮುಗಿಯುತ್ತಲೇ ಶ್ರೀನಿವಾಸನು ಪದ್ಮಾವತಿಯನ್ನು ತನ್ನ ಬಾಹುಗಳಲ್ಲೆತ್ತಿಕೊಂಡು ಶೃಂಗಾರ ಗೃಹದ ಕಡೆ ನಡೆದನು. ಇದನ್ನು

ನೋಡಿದ ರಮಾದೇವಿಯು ಮಿಂಚಿನಂತೆ ಓಡಿ ಬಂದು ಶಯ್ಯಾಗೃಹದ ಕದವನ್ನು ಮುಚ್ಚಿ ತಾನು ಬಾಗಿಲಿಗೆ ಅಡ್ಡವಾಗಿ ನಿಂತಳು.

ವಧೂವರರ ಹಿಂದೆಯೆ ಬಂದ ಜನರಿಗೆ ಇದೊಂದು ಸಂಭ್ರಮ, ಕುತೂಹಲ. ಶ್ರೀನಿವಾಸನು ಹಲವು ಬಗೆಯಿಂದ ಲಕ್ಷ್ಮೀದೇವಿಯನ್ನು ಬಾಗಿಲು ತೆಗೆಯಲು ವಿನಂತಿಸಿಕೊಳ್ಳುತ್ತಿದ್ದಾನೆ. ಆದರೆ ಆಕೆ ತೆಗೆಯಲು ನೀನು ಯಾರು? ಈ ರಾತ್ರಿಯಲ್ಲಿ ಬಂದು ಬಾಗಿಲನ್ನು ತೆಗೆ ಎನ್ನುತ್ತಿದ್ದೀಯಲ್ಲಾ?'' ಎನ್ನುತ್ತಾಳೆ. ಸ್ವಾಮಿಯು ತನ್ನ ದಶಾವತಾರಗಳನ್ನೂ ಹೇಳಿ ತನ್ನನ್ನು ಪರಿಚಯಿಸುತ್ತಾನೆ. ಆದರೆ ಅಮ್ಮನು ಅವನ ಒಂದೊಂದೂ ಅವತಾರಗಳನ್ನು ಖಂಡಿಸುತ್ತಾಳೆ. ಕೊನೆಗೆ ಶ್ರೀನಿವಾಸನು ನಾನು ಪದ್ಮಾವತಿಯನ್ನು ನನ್ನ ಬಾಹುಗಳಲ್ಲಿ ಎತ್ತಿಕೊಂಡು ಬಂದಿದ್ದೇನೆ. ಹಾಗೆ ಬಂದು ಬಹಳ ಹೊತ್ತಾಗಿದೆ. ಬಾಗಿಲು ತೆಗಿ ಎನ್ನುತ್ತಾನೆ. ಆಗ ಲಕ್ಷ್ಮೀದೇವಿಯು ನಿನ್ನ ನಾರಿಯನ್ನು ಮುದ್ದಾಡಿ ಧೀರಸುಖದಿ ಬದುಕ್ಕೋಗ್ಯೆ ಎನ್ನಲು ಸ್ವಾಮಿಯು ನಾನು ಬೇರೆಯಾರೂ ಅಲ್ಲ. ನಾನು ಏರಿವೇಂಕಟ. ನನ್ನ ನಾರಿಯ ಸಹಿತ ಬಂದಿದ್ದೇನೆ ಎನ್ನಲು ರಮಾದೇವಿಯು ''ಓಹೋ, ನೀನು ಏರಿವೇಂಕಟನೋ? ಸರಿ, ಹಾಗಾದರೆ, ಅವಳೊಡನೆ ಸುಖವಾಗಿ ಬಾಳು ಹೋಗು'' ಎಂದು ಬಾಗಿಲು ತೆಗೆಯುತ್ತಾಳೆ.

ನೆರೆದ ಜನರಿಗೆ ಲೀಲಾಮಾನುಷ ವಿಗ್ರಹನ ಈ ಲೀಲೆಯನ್ನು ನೋಡಿ ಪರಮ ಸಂತೋಷವಾಗುತ್ತದೆ. ಎಲ್ಲರೂ ತಾಂಬೂಲವನ್ನು ಪಡೆದು ತಂತಮ್ಮ ಮನೆಗಳಿಗೆ ತೆರಳುತ್ತಾರೆ.

## ಪದ್ಮಾವತಿಯನ್ನು ಶ್ರೀನಿವಾಸನಿಗೆ ಒಪ್ಪಿಸಿಕೊಟ್ಟರು

### ಐದನೇ ದಿನ

ವಿವಾಹದ ಬಳಿಕ ನಾಲ್ಕು ದಿನಗಳು ಸಂಭ್ರಮದಿಂದ ಮುಗಿದವು.

ಆಕಾಶರಾಜನು ಪ್ರತಿ ದಿನವೂ ಬೀಗರಿಗೂ ಪುರಜನರಿಗೂ ಷಡ್ರಸೋಪೇತವಾದ ಭೋಜನವನ್ನು ಮಾಡಿಸುತ್ತಿದ್ದನು. ಐದನೇ ದಿನ ನಾಕಬಲಿ ಅಥವಾ ನಾಗೋಲಿ.

ಸಕಲವೂ ಸಿದ್ಧವಾಯಿತು ದೀಪಸ್ತಂಭಗಳು ದೇದೀಪ್ಯಮಾನವಾಗಿ ಬೆಳಗುತ್ತಿದ್ದುವು. ರತ್ನಸಿಂಹಾಸನದಲ್ಲಿ ಶ್ರೀನಿವಾಸ ಪದ್ಮಾವತಿಯರು ಕುಳಿತರು. ಆಕಾಶ ರಾಜನು ಶ್ರೀನಿವಾಸನಿಗೆ ಅರ್ಘ್ಯಪಾದ್ಯಗಳನ್ನು ಕೊಟ್ಟನು. ವಧೂ-ವರರನ್ನು ಬಗೆಬಗೆಯಾಗಿ ಸತ್ಕರಿಸಿದನು. ಜಗನ್ಮೋಹನಾದ, ದಿವ್ಯ ಮಂಗಳ ವಿಗ್ರಹನಾದ ಶ್ರೀನಿವಾಸನನ್ನು ನೋಡಿದಷ್ಟೂ ರಾಜದಂಪತಿಗಳಿಗೆ ತೃಪ್ತಿಯಾಗದು. ಕೃತಾರ್ಥಭಾವದಿಂದ ಕಣ್ಣುಗಳು ಆನಂದಾಶ್ರುಗಳನ್ನು ಪುರಿಸುತ್ತಿದ್ದುವು.

ಹೆಣ್ಣನ್ನು ಒಪ್ಪಿಸಿಕೊಡುವ ಘಳಿಗೆ ಬಂದಿತು. ರಾಜದಂಪತಿಗಳು ಮೊದಲು ಬಕುಳಾದೇವಿಯನ್ನು ಒಂದು ಭದ್ರಾಸನದ ಮೇಲೆ ಕುಳ್ಳಿರಿಸಿದರು. ನಂತರ ಧರಣೀ ದೇವಿಯು ಅವಳಿಗೆ ಮಂಗಳದ್ರವ್ಯಗಳಿಂದಲೂ, ಮುತ್ತು ರತ್ನಗಳಿಂದಲೂ ಕೂಡಿದ ಬಾಗಿನವನ್ನು ಕೊಟ್ಟಳು. ಪದ್ಮಾವತಿಯ ಕೈಯಲ್ಲಿ ಫಲತಾಂಬೂಲಗಳನ್ನಿತ್ತು. ಆ ಕೈಯನ್ನು ಬಕುಳದೇವಿಯ ಕೈಯಲ್ಲಿರಿಸಿ, ಬಕುಳಾದೇವಿಯ ಹೊಕ್ಕುಳಿಗೆ ಹಾಲನ್ನು ಹಚ್ಚಿ, ಪದ್ಮಾವತಿಯನ್ನು ಬಕುಳೆಯು ಬಲ ತೊಡೆಯುಮೇಲೆ ಕುಳ್ಳಿರಿಸಿ, ರಾಜನೂ ಮತ್ತು ಧರಣೀದೇವಿಯು "ಅಮ್ಮಾ, ನಮ್ಮ ಒಬ್ಬಳೇ ಮಗಳನ್ನು ಬಹಳ ಪ್ರೀತಿಯಿಂದ ಸಾಕಿದ್ದೇವೆ. ಅವಳು ಏನೂ ಅರಿಯದ ಮುಗ್ಧೆ, ಕಾಯಿ ಕುಡುಗೋಲನ್ನು ನಿನ್ನ ಕೈಗೇ ಒಪ್ಪಿಸಿದ್ದೇವೆ. ಇವಳನ್ನು ಪರಿಗ್ರಹಿಸು" ಎಂದು ಕೇಳಿಕೊಂಡರು. ಬಕುಳಾದೇವಿಯು ಆ ವಿಷಯದಲ್ಲಿ ಅವರು ಚಿಂತಿಸಲೇ ಬೇಕಾಗಿಲ್ಲವೆಂದು ಆಶ್ವಾಸನೆಯನ್ನಿತ್ತಳು. ಹೀಗೆಯೇ ಲಕ್ಷ್ಮಿದೇವಿಗೂ ಪದ್ಮಾವತಿಯನ್ನು ಒಪ್ಪಿಸಿಕೊಟ್ಟರು. ಕಡೆಯದಾಗಿ ಶ್ರೀನಿವಾಸನಿಗೆ ಒಪ್ಪಿಸಿಕೊಡುವಾಗ ರಾಜದಂಪತಿಗಳಿಗೆ ದುಃಖವನ್ನು ತಡೆಯಲಾಗಲಿಲ್ಲ.

ಎಷ್ಟು ತಡೆದರೂ ದಂಪತಿಗಳ ಕಣ್ಣುಗಳಿಂದ ಕಣ್ಣೀರು ಧಾರೆ ಧಾರೆಯಾಗಿ ಹರಿಯುತ್ತಿತ್ತು, ಆದರೂ ಸುದಾರಿಸಿಕೊಂಡು "ಶ್ರೀನಿವಾಸಾ,

*"ಏತಾವತ್ಕಾಲ ಪರ್ಯಂತಂ ಪುತ್ರೀವತ್ ಪಾಲಿತಾ ಮಯಾ,*
*ಇದಾನೀಂ ತವ ಸೇವಾರ್ಥಂ ದತ್ತಾ ಸ್ನೇಹೇನ ಪಾಲಯ"*

ಇದುವರೆಗೂ ನಾನು ಇವಳನ್ನು ಮಗಳಂತೆ ಸಾಕಿದ್ದೇನೆ. ಇವಳನ್ನು ನಿನ್ನ ಸೇವೆಗಾಗಿ ಕೊಡುತ್ತಿದ್ದೇನೆ. ಇವಳನ್ನು ನೀನು ಸ್ನೇಹದಿಂದ ಪಾಲಿಸು" ಎಂದನು.

ಧರಣೀ ದೇವಿಯು- "ಹೇ ಜಗನ್ನಾಥಾ,

*ಪಾಲಿತಾಂ ಲಾಲಿತಾಂ ಪುತ್ರೀಂ ನವಮಾಸ ಧೃತಾಮಯಾ*
*ತ್ವದಧೀನಾಂ ಜಗನ್ನಾಥ ಕರಿಷ್ಯೇ ಮಮನಂದಿನೀಮ್ ॥*

ಒಂಭತ್ತು ತಿಂಗಳು ಹೊಟ್ಟೆಯಲ್ಲಿಟ್ಟುಕೊಂಡು ಇವಳನ್ನು ಲಾಲಿಸಿ ಪಾಲಿಸಿದ್ದೇನೆ, ಈಗ ಇವಳನ್ನು ನಿನ್ನ ಅಧೀನಳನ್ನಾಗಿ ಮಾಡುತ್ತಿದ್ದೇನೆ. ಸ್ವಾಮೀ, ಇವಳನ್ನು ಒಪ್ಪಿಸಿಕೋ ಎಂದು ಒಪ್ಪಿಸಿಕೊಟ್ಟಳು. ತೋಂಡಮಾನನಿಗೂ ದುಃಖವಾಯಿತು. ವಸುದಾನನ ದುಃಖವಂತೂ ಹೇಳತೀರದು.

ಈ ದುಃಖ ಸನ್ನಿವೇಶವು ದೇವತೆಗಳ, ಋಷಿಗಳ ಹಾಗೂ ನೆರೆದಿದ್ದ ಸಮಸ್ತರ ಕಣ್ಣುಗಳಲ್ಲಿಯೂ ನೀರನ್ನು ತರಿಸಿತು. ಇದನ್ನು ನೋಡಿ ಶ್ರೀನಿವಾಸನ ಕಣ್ಣುಗಳಲ್ಲಿಯೂ ನೀರುಬಂದಿತು. ಕೃಷ್ಣಾವತಾರದಲ್ಲಿದ್ದಾಗ ಸುಭದ್ರೆಯನ್ನು ಅರ್ಜುನನಿಗೆ ಒಪ್ಪಿಸಿಕೊಟ್ಟ ಸಂದರ್ಭವನ್ನು ನೆನೆದು ದುಃಖವಾಯಿತು ಎಂದನಂತೆ.

ಆ ಮೇಲೆ ಶ್ರೀನಿವಾಸನು ಪದ್ಮಾವತಿಯೊಡನೆ ಐರಾವತವನ್ನೇರಿ ತನ್ನ ಬಿಡಾರಕ್ಕೆ ತೆರಳಲನುವಾದನು. ಮಂಗಳ ವಾದ್ಯಗಳು ಭೋರ್ಗರೆಯ ತೊಡಗಿದವು. ರಂಭೆಯೇ ಮೊದಲಾದ ಅಪ್ಸರ ಸ್ತ್ರೀಯರು ನರ್ತನವನ್ನು

ಮಾಡುತ್ತಿದ್ದರು ದೇವತೆಗಳು ಹಿಂಬಾಲಿಸಿ ಬರುತ್ತಿದ್ದರು. ಹೀಗೆ ಶ್ರೀನಿವಾಸನು ತನ್ನ ಬಿಡಾರಕ್ಕೆ ಮರಳಿದನು. ಮತ್ತೆ ಶ್ರೀನಿವಾಸನ ಪದ್ಮಿನಿಯರ ಅಭೂತಪೂರ್ವ ಮೆರವಣಿಗೆ ನಡೆಯಿತು.

## ಪದ್ಮಾವತಿಯೊಡನೆ ಅಗಸ್ತ್ಯಾಶ್ರಮಕ್ಕೆ ಪ್ರಯಾಣ

ಶ್ರೀನಿವಾಸನು ಇನ್ನು ವೇಂಕಟಗಿರಿಗೆ ಪಯಣಿಸಲು ಅನುವಾದನು. ಅವನು ಅತ್ತೆ ಮಾವಂದಿರ ಬಳಿಗೆ ಹೋಗಿ ಇನ್ನು ತಾನು ಪದ್ಮಾವತಿಯೊಡಗೂಡಿ ತನ್ನ ನಿವಾಸಕ್ಕೆ ಹೊರಡಲು ಅಪ್ಪಣೆಯನ್ನು ಬೇಡಿದನು. ರಾಜದಂಪತಿಗಳಿಗೆ ಬಹಳ ದುಃಖವಾಯಿತು. ಇನ್ನು ಒಂದು ತಿಂಗಳಾದರೂ ಇದ್ದು ಹೋಗಿರೆಂದು ಬೇಡಿಕೊಂಡರು. ಆದರೆ ಶ್ರೀನಿವಾಸನು ತಾನು ತ್ವರೆಯಾಗಿ ಹೋಗಲೇ ಬೇಕಾಗಿದೆಯೆಂದು ಅವರನ್ನೊಪ್ಪಿಸಿದನು.

ಆಕಾಶರಾಜನು ಮಗಳು ಅಳಿಯನಿಗೆ ಬೇಕಾದ ಬಳುವಳಿಯನ್ನು ಕೊಟ್ಟು, ಶ್ರೀನಿವಾಸನ ಜೋತೆಯಲ್ಲಿ ಬಂದಿದ್ದ ಸಕಲ ದೇವತೆಗಳಿಗೂ, ಋಷಿ ಮುನಿಗಳಿಗೂ, ಬ್ರಾಹ್ಮಣ ಸುವಾಸಿನಿಯರಿಗೂ ಧಾರಾಳವಾಗಿ ಉಡುಗೊರೆಗಳನ್ನು ಕೊಟ್ಟು, ಮಗಳಿಗೆ ಹಿತವಚನಗಳನ್ನು ಹೇಳಿ ಕಳಿಸಿಕೊಟ್ಟನು. ಹಾಗೆಯೇ ಧರಣೀದೇವಿಯೂ ಸಹಾ ಮಗಳನ್ನಪ್ಪಿಕೊಂಡು, ಅವಳು ಗಂಡನ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸಿ ಬೀಳ್ಕೊಟ್ಟಳು-

ಶ್ರೀನಿವಾಸನು ಪದ್ಮಾವತಿಯನ್ನು ಕರೆದುಕೊಂಡು ಲಕ್ಷ್ಮೀದೇವಿ ಮತ್ತು ಬಕುಳಾದೇವಿಯೊಡನೆಯೂ, ಬ್ರಹ್ಮರುದ್ರಾದಿ ಸಮಸ್ತ ಪರಿವಾರದೊಡನೆಯೂ, ಆಕಾಶರಾಜನ ಪಟ್ಟಣದಿಂದ ಹೊರಟು ಸುವರ್ಣ ಮುಖರೀ ನದೀತೀರಕ್ಕೆ ಬಂದನು. ದೀಕ್ಷಾ ಬದ್ಧನಾಗಿರುವುದರಿಂದ, ಆರು ತಿಂಗಳುಗಳ ಕಾಲ ವೇಂಕಟಗಿರಿಯನ್ನು ಹತ್ತಬಾರದೆಂದು ನಿಶ್ಚಯಿಸಿ ಸುವರ್ಣಮುಖರೀ ತೀರದಲ್ಲಿರುವ ಅಗಸ್ತ್ಯಾಶ್ರಮದಲ್ಲೇ ಇರಲು

ನಿಶ್ಚಯಿಸಿದನು. ಈ ನಿರ್ಧಾರದಿಂದ ಅಗಸ್ತ್ಯಮುನಿಗಳ ಸಂತೋಷಕ್ಕೆ ಪಾರವಿಲ್ಲವಾಯಿತು. ಅವರು ಬಂದ ಸಮಸ್ತರನ್ನೂ ಯಥೋಚಿತವಾಗಿ ಸತ್ಕರಿಸಿದರು.

ಬ್ರಹ್ಮರುದ್ರಾದಿ ದೇವತೆಗಳೂ, ಋಷಿ-ಮುನಿಗಳೂ, ಇತರರೂ ಶ್ರೀನಿವಾಸನ ಅಪ್ಪಣೆಯನ್ನು ಪಡೆದು ತಂತಮ್ಮ ನಿವಾಸಗಳಿಗೆ ಹೊರಡಲು ಸಿದ್ಧರಾದರು. ಶ್ರೀನಿವಾಸನು ಅವರಿಗೆಲ್ಲಾ ತಕ್ಕ ಉಡುಗೊರೆಗಳನ್ನಿತ್ತು ಕಳಿಸಿಕೊಟ್ಟನು.

ಇತ್ತ ಲಕ್ಷ್ಮೀದೇವಿಯೂ ಸಹಾ ಶ್ರೀನಿವಾಸನ ಅಪ್ಪಣೆ ಪಡೆದು ಕೊಲ್ಲಾಪುರಕ್ಕೆ ಪಯಣ ಬೆಳೆಸಿದಳು. ಶ್ರೀನಿವಾಸನು ಆರು ತಿಂಗಳುಗಳ ಕಾಲ ಅಗಸ್ತ್ಯಾಶ್ರಮದಲ್ಲಿ ಪದ್ಮಾವತೀ ದೇವಿಯೊಡನೆ ವಿನೋದವಾಗಿ ಕಾಲ ಕಳೆಯತೊಡಗಿದನು.

ಫಲಸ್ತುತಿ

ಪುಣ್ಯಕರವಾದ, ಪರಮ ಮಂಗಳಕರವಾದ ಶ್ರೀನಿವಾಸನ ಈ ವಿವಾಹಮಹೋತ್ಸವದ ಕಥೆಯನ್ನು ಪಠಿಸುವುದರಿಂದಲೂ, ಶ್ರವಣ ಮಾಡುವುದರಿಂದಲೂ ಎಂತಹ ಪುಣ್ಯವು ಪ್ರಾಪ್ತವಾಗುವುದೆಂಬುದನ್ನು ಶತಾನಂದ ಮಹರ್ಷಿಗಳು ಜನಕರಾಜನಿಗೆ ತಿಳಿಸುತ್ತಾರೆ-

ಯಾರು ಅತ್ಯಂತ ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ಶ್ರೀನಿವಾಸನ ಈ ವಿವಾಹ ಮಹೋತ್ಸವದ ಕಥೆಯನ್ನು ಹೇಳುತ್ತಾರೆಯೋ, ಕೇಳುತ್ತಾರೆಯೋ, ಬರೆಯುತ್ತಾರೆಯೋ ಹಾಗೆಯೇ ಓದುತ್ತಾರೆಯೋ ಅವರಿಗೆ ಕೋಟಿ ಕನ್ಯಾದಾನದ ಫಲವೂ, ಅಖಂಡ ಭೂಮಂಡಲವನ್ನು ದಾನ ಮಾಡಿದ ಫಲವೂ ಲಭಿಸುತ್ತದೆ. ಅಲ್ಲದೆ ಶ್ರೀನಿವಾಸನಲ್ಲಿ ಅತಿಶಯಭಕ್ತಿಯನ್ನು ಹೊಂದಿ ಕೊನೆಗೆ ಮೋಕ್ಷವನ್ನು ಸಹಾ ಪಡೆಯುತ್ತಾರೆ. ಅವರ ಎಲ್ಲ ಅಭೀಷ್ಟಗಳು ನೆರವೇರುತ್ತವೆ. ಶ್ರೀನಿವಾಸ ಕಲ್ಯಾಣ

ಮಹೋತ್ಸವವನ್ನು ವಿಧಿಪೂರ್ವಕವಾಗಿ ಮಾಡುವವರಿಗೆ ಸರ್ವಫಲಗಳೂ ದೊರಕುವುವು. ಇದು ಎಲ್ಲರಿಗೂ ಶುಭವನ್ನೂ, ಮಂಗಳವನ್ನೂ ಪ್ರದಾನ ಮಾಡುವುದು.

*"ಶುಭದಂ ಶ್ರುಣ್ವತಾಂ ರಾಜನ್ ಸರ್ವೇಷಾಂ ಮಂಗಳಪ್ರದಂ"*

ಶ್ರೀ ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀ ವೇಂಕಟೇಶ ಪ್ರಿಯತಾಂ ಪ್ರಿಯತೋಭವತು

ಶ್ರೀ ಕೃಷ್ಣಾರ್ಪಣಮಸ್ತು

ರುಕ್ಮಿಣೀ ಗಿರಿಮಾಜಿ

13-10-97

## ಪರಿಶಿಷ್ಟ ೧

**ಆಕಾಶರಾಜನು ವಿವಾಹ ಸಮಯದಲ್ಲಿ ಶ್ರೀನಿವಾಸನಿಗೆ ಕೊಟ್ಟ ಉಡುಗೊರೆಗಳು**

ಎರಡು ಕೋಟಿ ಹದಿನಾಲ್ಕು ಬಂಗಾರದ ನಾಣ್ಯಗಳು. ವಜ್ರ ವೈಢೂರ್ಯಗಳನ್ನು ಕೆತ್ತಿದ ನೂರು ಭಾರದ ಕಿರೀಟ. ಅಷ್ಟೇ ತೂಕದ ಕಂಠಿಹಾರ. ಮಾಣಿಕ್ಯದ ಪದಕಗಳು. ಮಕರ ಕುಂಡಲಗಳು. ಕೈಗಳಿಗೆ ನವರತ್ನ ಖಚಿತವಾದ ಕಡಗಗಳು, ಕಾಲುಗಳಿಗೆ ಬಂಗಾರದ ಅಂದುಗೆ, ಮತ್ತು ರತ್ನಗಳ ಅನೇಕ ಹಾರಗಳು ಭುಜಕೀರ್ತಿ. ಅಮೂಲ್ಯವಾದ, ವಜ್ರ-ವೈಢೂರ್ಯಗಳ ನಡುಕಟ್ಟು. ಬಂಗಾರದ ತಟ್ಟೆಗಳು ಮತ್ತು ಬಂಗಾರದ ಭೋಜನ ಪಾತ್ರೆಗಳು. ಅಪರಂಜಿಯಿಂದ ಅಲಂಕೃತವಾದ ಪಾದುಕೆಗಳು. ಪೀತಾಂಬರಗಳು, ಉತ್ತರೀಯಗಳು, ರತ್ನಗಂಬಳಿಗಳು ಇತ್ಯಾದಿ.

## ಪರಿಶಿಷ್ಟ ೨

**ಕ್ಷೇಮ ತಂಡುಲ**

ಎತ್ತಿನಗಾಡಿಗಳ ಮೇಲೆ ನೂರಾರು ಖಂಡುಗ ಅಕ್ಕಿ, ಬೆಲ್ಲ, ಹೆಸರು ಬೇಳೆ, ಹುಣಿಸೆಹಣ್ಣು, ಸಾವಿರಾರು ಕೊಡಗಳ ಹಾಲು, ಮೊಸರು, ತುಪ್ಪ, ಸಾಸುವೆ, ಮೆಂತ್ಯ, ಇಂಗು, ಉಪ್ಪು ಸಕ್ಕರೆ ಇತ್ಯಾದಿ. ಬಾಳೆಕಾಯಿ, ಕುಂಬಳಕಾಯಿ, ಗೆಡ್ಡೆ-ಗೆಣಸುಗಳು ಇತರ ತರಕಾರಿಗಳು. ಎರಡು ನೂರು ಜೇನು ತುಪ್ಪದ ಕೊಡಗಳು ಹತ್ತು ಸಾವಿರ ಕುದುರೆಗಳು, ಒಂದು ಸಾವಿರ ಆನೆಗಳು, ಐದು ಸಾವಿರ ಹಸುಗಳು ಅನೇಕ ದಾಸದಾಸಿಯರು, ರತ್ನ ಕಛಿತವಾದ ಮಂಚ, ಹಂಸ ತೂಲಿಕಾ ತಲ್ಪ. ಇವಲ್ಲದೆ ಅನೇಕ ಬಗೆಯ ಭಕ್ಷ್ಯ-ಭೋಜ್ಯಗಳು.

## ಪರಿಶಿಷ್ಟ 3

### ಆನಂದ ನಿಲಯ

ಹೌದು, ವಿವಾಹವೇನೋ, ದಿವ್ಯ-ಭವ್ಯವಾಗಿ ನಡೆಯಿತು. ಮದುವೆಯಾದ ನಂತರ ಆರು ತಿಂಗಳು ಬೆಟ್ಟವನ್ನೇರುವುದಿಲ್ಲವೆಂದು ಸ್ವಾಮಿಯು ಪದ್ಮಾವತಿಯೊಡನೆ ಅಗಸ್ತ್ಯಾಶ್ರಮದಲ್ಲಿ ನೆಲೆಸಿದನು.

ಆರು ತಿಂಗಳ ನಂತರ ಬೆಟ್ಟಕ್ಕೆ ಹೋಗಲೇ ಬೇಕು. ಅದೇ ಅವನ ವಾಸಸ್ಥಳ. ವರಾಹದೇವರಿಂದ ಕೊಡಲ್ಪಟ್ಟ ಭೂಮಿಯಲ್ಲಿ ಆಕಾಶರಾಜನ ಮಗಳಾದ ಪದ್ಮಾವತಿಯೊಡನೆ ವಾಸಿಸಲು ಮನೆಯೊಂದು ಬೇಡವೆ?

ಸ್ವಾಮಿಯು ತೋಂಡಮಾನನನ್ನು ಕರೆಸಿ-ತನಗೊಂದು ಸುಂದರವೂ ಭವ್ಯವೂ ಆದ ಮಂದಿರವನ್ನು ಕಟ್ಟಿಸಿಕೊಡುವಂತೆ ಹೇಳಿದನು. ತೋಂಡಮಾನನಿಗೆ ಬಹಳ ಸಂತೋಷವಾಯಿತು.

ಒಂದು ಒಳ್ಳೆಯ ಮುಹೂರ್ತದಲ್ಲಿ ಆಲಯವನ್ನು ಕಟ್ಟಲು ಪ್ರಾರಂಭಿಸಿದರು. ವರಾಹಸ್ವಾಮಿಯು ಕೊಟ್ಟಿದ್ದ ಸ್ಥಳದಲ್ಲಿ, ಸ್ವಾಮಿಪುರಷ್ಕರಿಣೀ ತೀರದಲ್ಲಿ ಆಲಯವು ಕಟ್ಟತಕ್ಕದೆಂದೂ, ಅದು ಪೂರ್ವಾಭಿಮುಖವಾಗಿರ ಬೇಕೆಂತಲೂ, ಸಪ್ತ ಪ್ರಾಕಾರಗಳಿಂದಲೂ ಸಪ್ತದ್ವಾರಗಳಿಂದಲೂ ಕೂಡಿರತಕ್ಕದ್ದೆಂದು ಸ್ವಾಮಿಯು ತೋಂಡಮಾನರಾಜನಿಗೆ ನಿರ್ದೇಶಿಸಿದನು. ಅಲ್ಲದೆ ವಿಶಾಲವಾದ ಕೊಠಡಿಗಳಿಂದಲೂ, ದಿವ್ಯಮಂಟಪಗಳಿಂದಲೂ, ಗಜ ಶಾಲೆ, ಅಶ್ವಶಾಲೆ, ಪಾಕಶಾಲೆ, ಗೋಶಾಲೆ ಭವ್ಯವಾದ ಹಜಾರಗಳಿಂದ ಕೂಡಿರಬೇಕೆಂದೂ ಸ್ವಾಮಿಯು ಅಪ್ಪಣೆ ಕೊಡಿಸಿದನು.

ಶ್ರೀನಿವಾಸನು ಅಪ್ಪಣೆ ಕೊಡಿಸಿದ ರೀತಿಯಲ್ಲೇ ಭವನ ನಿರ್ಮಾಣಕಾರ್ಯವು ನಡೆಯ ತೊಡಗಿತು. ನಾರಾಯಣಪುರ, ತಿರುಪತಿ ಮತ್ತು ಇತರ ಸುತ್ತು ಮುತ್ತಲ ಪ್ರದೇಶದಿಂದ ಸ್ವಾಮಿಯದರ್ಶನಕ್ಕಾಗಿ

ಬರುವ ಭಕ್ತರಿಗಾಗಿ ತೋಂಡಮಾನನು ವೆಂಕಟಗಿರಿಗೆ ಬರಲು ಮೆಟ್ಟಿಲುಗಳನ್ನೂ, ದಾರಿಯಲ್ಲಿ ಅನೇಕ ಮಂಟಪಗಳನ್ನೂ ಕಟ್ಟಿಸಿದನು, ಭಾವಿಗಳನ್ನು ತೋಡಿಸಿದನು.

ಶ್ರೀನಿವಾಸನಿಗೆ ಬಹಳ ಆನಂದವಾಯಿತು ಆನಂದ ಸ್ವರೂಪನಿಗೆ ಪ್ರೀತಿಕರವಾದ್ದರಿಂದ ಈ ಭವನಕ್ಕೆ ಆನಂದ ನಿಲಯವೆಂದು ಹೆಸರಾಯ್ತು.

ಗೃಹಪ್ರವೇಶದ ದಿನ ಗೊತ್ತಾಯಿತು. ಬ್ರಹ್ಮರುದ್ರಾದಿ ಸಕಲದೇವತೆಗಳಿಗೂ, ವಶಿಷ್ಟ ಮೊದಲಾಗಿ ಸಕಲ ಋಷಿಮುನಿಗಳಿಗೂ, ಶ್ರೀನಿವಾಸನ ಭಕ್ತರಿಗೂ ಆಹ್ವಾನ ಪತ್ರಿಕೆಗಳು ತಲುಪಿದುವು. ವೇಂಕಟಾಚಲಕ್ಕೆ ಎಲ್ಲರೂ ಬಂದು ಸೇರಿದರು ಸ್ವಾಮಿಯು ಪದ್ಮಾವತಿಯೊಡನೆ ಶುಭಮುಹೂರ್ತದಲ್ಲಿ ಮಂದಿರವನ್ನು ಪ್ರವೇಶಿಸಿದನು. ದೇವ ದುಂದುಭಿಗಳು ಮೊಳಗಿದುವು. ಪುಷ್ಪ ವೃಷ್ಟಿಯಾಯಿತು. ಅಪ್ಸರೆಯರಿಂದ ನಾಟ್ಯವಾಯಿತು. ಗಂಧರ್ವರು ಸ್ವಾಮಿಯ ಮಹಿಮೆಯನ್ನು ಹಾಡಿ ಹೊಗಳಿದರು ಗೃಹ ಪ್ರವೇಶವು ಬಹಳ ವಿಜೃಂಭಣೆಯಿಂದ ನಡೆಯಿತು. ಶ್ರೀನಿವಾಸನು ಬಂದ ಜನರಿಗೆಲ್ಲಾ ಅವರವರಿಗೆ ಯೋಗ್ಯವಾದ ಉಡುಗೊರೆಗಳನ್ನು ಕೊಟ್ಟು ಸತ್ಕರಿಸಿದನು.

ಮಂದಿರ ಪ್ರವೇಶ ನಂತರ ಬ್ರಹ್ಮದೇವರು ಅಲ್ಲಿ ಎರಡು ಅಖಂಡ ಜ್ಯೋತಿಗಳನ್ನು ಬೆಳಗಿಸಿ ಇವುಗಳು ಸಕಲ ಪ್ರಾಣಿಗಳ ಹಿತಸಾಧನೆಗಾಗಿಯೂ, ಲೋಕ ಕಲ್ಯಾಣಕ್ಕಾಗಿಯೂ, ಕಲಿಯುಗವು ಮುಗಿಯುವವರೆಗೂ ಬೆಳಗುತ್ತಿರಬೇಕೆಂದು ಸ್ವಾಮಿಯಿಂದ ವರವನ್ನು ಪಡೆದರು. ನಂತರ ಶ್ರೀನಿವಾಸನು ಬ್ರಹ್ಮದೇವರನ್ನು ಕುರಿತು ಪ್ರತಿವರ್ಷವೂ ಧ್ವಜಾರೋಹಣದಿಂದ ಮೊದಲುಗೊಂಡು ರಥೋತ್ಸವವು ಮುಗಿಯುವವರೆಗೂ ಎಲ್ಲ ಉತ್ಸವಗಳನ್ನೂ ವಿಜೃಂಭಣೆಯಿಂದ ನಡೆಸತಕ್ಕದ್ದೆಂದು ಬ್ರಹ್ಮದೇವರಿಗೆ ಆಜ್ಞಾಪಿಸಿದನು. ಅಂತೆಯೇ ಬ್ರಹ್ಮ ದೇವರು ತೋಂಡಮಾನನ್ನು ಕರೆಸಿ ಸಕಲ ಏರ್ಪಾಟುಗಳನ್ನೂ ಮಾಡಿದರು.

ಬ್ರಹ್ಮದೇವರು ಮಾಡುವುದರಿಂದ ಇದಕ್ಕೆ ಬ್ರಹ್ಮೋತ್ಸವವೆಂದು ಹೆಸರಾಯಿತು.

## ಪರಿಶಿಷ್ಟ ಛ

### ತೋಂಡಮಾನ

ತೊಂಡಮಾನನು ಆಕಾಶರಾಜನ ತಮ್ಮ, ಹಿಂದೆ ವೈಖಾನಸರೆಂಬ ಋಷಿಗಳಿದ್ದರು. ಅವರು ಪರಮ ವಿಷ್ಣುಭಕ್ತರು, ತಪಸ್ವಿಗಳು ಅವರು ಶ್ರೀಕೃಷ್ಣನ ಸಾಕ್ಷಾತ್ಕಾರಕ್ಕಾಗಿ ಉಗ್ರತಪಸ್ಸನ್ನು ಮಾಡಿದರು. ಅವರ ಭಕ್ತಿ ಭಾವಕ್ಕೂ, ನಿಷ್ಠೆಗೂ ಮೆಚ್ಚಿ ಸ್ವಾಮಿಯು ಶ್ರೀಹರಿಯು ಗೋಪಾಲ ವೇಷದಿಂದ ಅವರಿಗೆ ದರ್ಶನ ಕೊಟ್ಟನು. ವೈಖಾನಸರು ಆನಂದ ಭರಿತವಾಗಿ ತಾವು ಆ ಗೋಪಾಲನನ್ನು ಪೂಜಿಸಿಕೊಂಡಿರಲು ಅನುಗ್ರಹಿಸಬೇಕೆಂದು ಸ್ವಾಮಿಯನ್ನು ಕೇಳಿಕೊಂಡರು. ಅದಕ್ಕೆ ಪ್ರಭುವು ಅವರು ಧ್ಯಾನಿಸಿದ ರೂಪವು ಶ್ರೀನಿವಾಸನ ರೂಪವೆಂತಲೂ, ಅವರು ಶೇಷಾಚಲಕ್ಕೆ ಹೋದರೆ ಅಲ್ಲಿ ಒಂದು ಹುತ್ತದಲ್ಲಿ ಶ್ರೀನಿವಾಸನ ದಿವ್ಯ ಸುಂದರವಿಗ್ರಹವಿರುವುದೆಂದೂ ಅದನ್ನು ತೆಗೆದು ಅದಕ್ಕೆ ಪೂಜೆ ಮಾಡಿಕೊಂಡಿರಬೇಕೆಂದು ಅಪ್ಪಣೆ ಕೊಡಿಸಿದನು. ಅಲ್ಲದೆ ಅವರಿಗೆ ದಾರಿಯಲ್ಲಿ ರಂಗದಾಸನೆಂಬ ಶೂದ್ರನೊಬ್ಬನು ದೊರಕುವನೆಂತಲೂ, ಅವನನ್ನು ಸೇವಕನನ್ನಾಗಿ ಮಾಡಿಕೊಂಡಿರಬೇಕೆಂತಲೂ ಹೇಳಿದನು.

ವೈಖಾನಸರು ಸ್ವಾಮಿಯ ಅಪ್ಪಣೆ ಮೇರೆಗೆ ಶೇಷಾಚಲವನ್ನು ಕುರಿತು ಪ್ರಯಾಣ ಬೆಳಸುತ್ತಿದ್ದಾಗ ಸ್ವಾಮಿಯು ಹೇಳಿದಂತೆ ದಾರಿಯಲ್ಲಿ ರಂಗದಾಸನ ಭೇಟಿಯಾಯಿತು. ಅವನನ್ನು ಕರೆದುಕೊಂಡು ವೇಂಕಟಾಚಲಕ್ಕೆ ಬಂದು ಹುತ್ತನ್ನರಸಿದಾಗ ಅವರಿಗೆ ಹುತ್ತವೂ, ಹುತ್ತದಲ್ಲಿನ ಸ್ವಾಮಿಯೂ ದೃಗೋಚಾರರಾದರು.

ಅಂದಿನಿಂದ ವೈಖಾನಸಮುನಿಗಳು ಸ್ವಾಮಿಯ

ಪೂಜಾನಿರತರಾಗಿದ್ದರು. ರಂಗದಾಸನು ಅವರು ಹೇಳಿದ ಕೆಲಸಗಳನ್ನು ಮಾಡಿಕೊಂಡು ದೇವರ ಪೂಜೆಗೆ ಹೂಗಳನ್ನು ತಂದುಕೊಡುತ್ತಿದ್ದನು.

ಒಂದು ದಿನ ರಂಗದಾಸನು ದಿನ ನಿತ್ಯದಂತೆ ಸ್ನಾನಕ್ಕಾಗಿ ಸ್ವಾಮಿ ಪುಷ್ಕರಿಣಿಗೆ ಹೋದನು. ಆ ಸಮಯದಲ್ಲಿ ಗಂಧರ್ವನೊಬ್ಬನು ತನ್ನ ಪತ್ನಿಯೊಡನೆ ಜಲಕ್ರೀಡೆಯಲ್ಲಿದ್ದನು. ಇದನ್ನು ನೋಡಿ ರಂಗದಾಸನ ಮನಸ್ಸು ಸಡಿಲವಾಯಿತು. ನಂತರ ತನ್ನ ನಿಷ್ಠೆಯು ಭಂಗವಾದುದಕ್ಕೆ ಪಶ್ಚಾತ್ತಾಪಗೊಂಡ ರಂಗದಾಸನು ಮತ್ತೆ ಸ್ನಾನಮಾಡಿ ಪುಷ್ಪಚಯನ ಮಾಡಿಕೊಂಡು ಹೋಗುವ ಹೊತ್ತಿಗೆ ವೈಖಾನಸರ ಪೂಜೆ ಮುಗಿದಿದ್ದಿತು. ತಡವಾಗಿ ಬಂದ ಇವನನ್ನು ನೋಡಿ ಋಷಿಗಳು ಕೋಪಗೊಂಡು ಅವನನ್ನು ನಿಂದಿಸಿದರು. ರಂಗದಾಸನು ತನ್ನ ತಪ್ಪಿಗೆ ಮೊದಲೇ ನೋಂದಿದ್ದನು. ಸ್ವಾಮಿಯ ಪೂಜೆಗೆ ಸಕಾಲಕ್ಕೆ ಹೂಗಳನ್ನು ಒದಗಿಸಲಾಗಲಿಲ್ಲವಲ್ಲಾ ಎಂದು ಪಶ್ಚಾತಾಪ ಪಡುತ್ತಿದ್ದನು. ಈಗ ಋಷಿಗಳಿಂದ ನಿಂದನೆಯನ್ನು ಕೇಳಿ ಅವನ ದುಃಖಉಮ್ಮಳಿಸಿ ಬಂತು. ಅವನು ಶ್ರೀನಿವಾಸನನ್ನು ಕುರಿತು ಸ್ತೋತ್ರ ಮಾಡತೊಡಗಿದನು.

ಭಕ್ತ ಪರಾಯಣನಾದ ಶ್ರೀಹರಿಯು ರಂಗದಾಸನನ್ನು ಸಂತೈಸಿ–ನಿನ್ನ ಪಶ್ಚಾತ್ತಾಪದಿಂದಲೇ ನೀನು ಪುನೀತನಾಗಿರುತ್ತೀಯ. ಭಯ ಪಡಬೇಡ. ನೀನು ಸ್ವಾಮಿ ಪುಷ್ಕರಿಣೀ ಪೀಠದಲ್ಲಿ ದೇಹತ್ಯಾಗ ಮಾಡಿಬಿಡು. ಕೆಲವು ಕಾಲ ಕಳೆದ ಮೇಲೆ ನೀನು ಸುಧರ್ಮರಾಜನ ಎರಡನೆಯ ಮಗನಾಗಿ ಹುಟ್ಟಿ ಸಕಲರಾಜಭೋಗಗಳನ್ನು ಅನುಭವಿಸುವೆ. ನನ್ನ ವಿವಾಹದಲ್ಲೂ ಪಾಲ್ಗೊಳ್ಳುವೆ'' ಎಂದು ಹೇಳಿದನು.

ರಂಗದಾಸನು ಭಗವಂತನು ಹೇಳಿದಂತೆಯೇ ನಡೆದುಕೊಂಡನು. ಆರಂಗದಾಸನೇ ಈಗ ತೋಂಡಮಾನನಾಗಿ ಆಕಾಶರಾಜನ ತಮ್ಮನಾಗಿ ಜನ್ಮ ತಾಳಿದ್ದನು.

## ಪರಿಶಿಷ್ಟ

### ಬ್ರಹ್ಮೋತ್ಸವ

ಶ್ರೀನಿವಾಸನು ಪದ್ಮಾವತಿಯೊಡಗೂಡಿ ಆನಂದನಿಲಯದಲ್ಲಿ ನೆಲಸಿದ ನಂತರ, ಬ್ರಹ್ಮದೇವರು ಆ ಮಂದಿರದಲ್ಲಿ ಎರಡು ಅಖಂಡ ದೀಪಗಳನ್ನು ಹೊತ್ತಿಸಿ. ಸಕಲ ಪ್ರಾಣಿಗಳ ಹಿತಸಾಧನೆಗಾಗಿ, ಮಂಗಳಕರವಾಗಿ ಈ ಜ್ಯೋತಿಗಳು ಕಲಿಯುಗದ ಕೊನೆಯ ತನಕ ಪ್ರಜ್ವಲಿತವಾಗಿಯೇ ಇರಬೇಕೆಂಬ ವರವನ್ನು ಶ್ರೀನಿವಾಸನಿಂದ ಪಡೆದರು.

ಶ್ರೀನಿವಾಸನು ಬ್ರಹ್ಮದೇವರಿಗೆ ಈ ಸಂದರ್ಭದಲ್ಲಿ ಧ್ವಜಾರೋಹಣದಿಂದ ಮೊದಲುಗೊಂಡು, ರಥೋತ್ಸವದವರೆಗೆ ಬಹಳ ವಿಜೃಂಭಣೆಯಿಂದ ಎಲ್ಲ ಉತ್ಸವಗಳನ್ನೂ ನಡೆಸಬೇಕೆಂದು ಅಪ್ಪಣೆಯಿತ್ತನು. ಬ್ರಹ್ಮದೇವನು ತೋಂಡಮಾನನಿಗೆ ಹೇಳಿ ಕಳುಹಿಸಿ ಅತಿಸುಂದರವಾದ, ವಿಶಾಲವಾದ ಒಂದು ರಥವನ್ನು ಮರದಿಂದ ಮಾಡಿಸಬೇಕೆಂದು ಹೇಳಿದನು. ಅಲ್ಲದೆ ಅನೇಕ ಲೋಹಮಯವಾದ ವಾಹನಗಳನ್ನು ಮಾಡಿಸಬೇಕೆಂದನು. ಈ ಸಂದರ್ಭಕ್ಕಾಗಿಯೇ ಕಾದಿದ್ದರಂತೆ ವಿಶ್ವಕರ್ಮನು ತನ್ನ ಸಹ ಕರ್ಮಚಾರಿಗಳೊಂದಿಗೆ ಬಂದು ದಿವ್ಯ ಸುಂದರವಾದ ರಥವನ್ನೂ, ವಾಹನಾದಿಗಳನ್ನೂ ಸಿದ್ಧಪಡಿಸಿದನು.

ಬ್ರಹ್ಮದೇವನು ಮಾಡುವುದರಿಂದ ಇದಕ್ಕೆ ಬ್ರಹ್ಮೋತ್ಸವವೆಂದು ಹೆಸರಾಯಿತು.

### ಬ್ರಹ್ಮೋತ್ಸವದ ಕಾರ್ಯವಿವರಗಳು

ಧ್ವಜಾರೋಹಣದ ಹಿಂದಿನ ದಿನ ಸಂಜೆ ಸಕಲಜನರೂ ಹೋಗಿ ಹುತ್ತದ ಮಣ್ಣನ್ನು ಸಂಗ್ರಹಿಸಿ ಅದನ್ನು ಆನೆಯ ಮೇಲಿಟ್ಟು ವಾದ್ಯ ವೈಭವದೊಂದಿಗೆ ತರುತ್ತಾರೆ- ಮರುದಿನ ಅಂಕುರಾರ್ಪಣ. ಅದರ ಮರುದಿನ ಬಹಳ ಸಂಭ್ರಮದಿಂದ ಧ್ವಜಾರೋಹಣ ನಡೆಯುವುದು.

ಆಶ್ವೀಜ ಮಾಸದ ಶರನ್ನವರಾತ್ರಿಯಲ್ಲಿ ಬ್ರಹ್ಮ ದೇವರು ಈ ಉತ್ಸವವನ್ನು ನಡೆಸಿದ್ದರಿಂದ ಅದು ಇಂದಿನವರೆಗೂ ಹಾಗೆಯೇ ಪರಂಪರಾಗತವಾಗಿ ನಡೆದುಬರುತ್ತಿದೆ. ಮೊದಲನೆದಿನ ಪಲ್ಲಕ್ಕಿ ಉತ್ಸವ. ಅಂದೇ ಸಂಜೆ ಶೇಷವಾಹನ, ಎರಡನೇ ದಿನ ಹಂಸವಾಹನ. ಮೂರನೇ ದಿನ ಬೆಳಿಗ್ಗೆ ಸಿಂಹ ವಾಹನೋತ್ಸವ ಮತ್ತು ಸಂಜೆ ಮುತ್ತಿನ ಮಂಟಪದ ಉತ್ಸವ ನಡೆಯುವುದು. ನಾಲ್ಕನೇ ದಿನ ಬೆಳಿಗ್ಗೆ ಕಲ್ಪವೃಕ್ಷೋತ್ಸವವೂ ಸಂಜೆಗೆ ಭೂಪಾಲೋತ್ಸವ. ಐದನೇ ದಿನ ಬೆಳಿಗ್ಗೆ ಪಲ್ಲಕ್ಕಿ ಸೇವೆ, ಮೋಹಿನೀ ಅಲಂಕಾರ, ರಾತ್ರಿ ಗರುಡೋತ್ಸವ. ಆರನೇ ದಿನ ಬೆಳಿಗ್ಗೆ ಹನುಮ ವಾಹನ ಸಂಜೆ ಐರಾವತಗಜವಾಹನೋತ್ಸವ. ಏಳನೇದಿನ ಸೂರ್ಯ ಮಂಡಲಯಾನೋತ್ಸವ ಎಂಟನೇ ದಿನ ಬ್ರಹ್ಮದೇವರೇ ರಥೋತ್ಸವವನ್ನು ನಡೆಸಿದರು. ಆರನೇ ದಿನವೇ ಶ್ರೀನಿವಾಸ ಕಲ್ಯಾಣೋತ್ಸವ. ಕೊನೆಗೆ ಎಲ್ಲರೂ ಸ್ವಾಮಿ ಪುಷ್ಕರಿಣಿಯಲ್ಲಿ ಅವಭೃತಸ್ನಾನ ಮಾಡುವರು. ಅಂದೇ ಲಕ್ಷಪುಷ್ಪಯಾಗ ನಡೆಯುವುದು.

ಹೀಗೆ ಮೊಟ್ಟ ಮೊದಲು ಬ್ರಹ್ಮೋತ್ಸವವನ್ನು ನಡೆಸಿದ ಬ್ರಹ್ಮದೇವರು ಎಲ್ಲರನ್ನೂ ಸತ್ಕರಿಸಿ ಸತ್ಯಲೋಕಕ್ಕೆ ಹೋದರು. ಇತರ ದೇವ ದೇವತೆಗಳೂ, ಬಂದಿದ್ದ ಜನರೂ ತಂತಮ್ಮ ಸ್ಥಾನಗಳಿಗೆ ಹೋದರು.

ಅಂದಿನಿಂದ ಇಂದಿನವರೆಗೆ ಆಶ್ವೀಜ ಶುದ್ಧ ಪಾಡ್ಯದಿಂದ ಮೊದಲುಗೊಂಡು ದಶಮೀಪರ್ಯಂತ ಈ ಬ್ರಹ್ಮೋತ್ಸವವು ಬ್ರಹ್ಮದೇವರು ನಡೆಸಿಕೊಟ್ಟ ರೀತಿಯಲ್ಲೇ ಅತಿ ವಿಜೃಂಭಣೆಯಿಂದ ನಡೆಯುತ್ತಿದೆ.

# ಶ್ರೀ ವೇಂಕಟೇಶಾಷ್ಟಕಾಮ್

## ಗೋಪೀಗೀತೆಯಂತೆ

*ಕಮಲಜಾರ್ಚಿತಂ ಕಾಮಿತಪ್ರದಂ*
*ವಿಮಲ ಲೋಚನಂ ವಿದ್ರುಮಾಧರಮ್*
*ವರಕಿರೀಟನಂ ವಾರಿಜಾನನಂ*
*ವರದ ವೇಂಕಟಾಧೀಶ್ವರಂ ಭಜೇ* 1

*ನಯನ ಸುಂದರಂ / ನೀಲಕುಂತಲಂ*
*ಭಯ ನಿವಾರಣಂ / ಭಾಗ್ಯದಾಯಕಮ್*
*ಕರ್ಣಕುಂಡಲಾ ಕಾಂಚನಾಂಬರಂ –*
*ವರದ ವೇಂಕಟಾಧೀಶ್ವರ ಭಜೇ* 2

*ಮಿಲಿತ ಕೇಸರೀ–ಗಂಧ ಚರ್ಚಿತಂ*
*ರಮಣೀ ಇಂದಿರಾರಾಧಿತಂಮುದಾ*
*ಹಾರವೀ ಮುಖಂ ಹಾರಭೂಷಣಂ –*
*ವರದವೇಂಕಟಾಧೀಶ್ವರಂ ಭಜೇ* 3

*ಜಗತಿ ಕಾಮಿತಂ ಜಾನಕೀ ಪತಿಂ*
*ಸನಕ ವಂದಿತಂ ಸಾದುಭೂಷಣಮ್*
*ಶರಧನುರ್ಧರಂ ಶ್ಯಾಮಸುಂದರಂ*
*ವರದೇವೇಂಕಟಾಧೀಶ್ವರಂ ಭಜೇ* 5

*ಭುಜಪರಾಕ್ರಮಂ ಭಾಸ್ವರಾಂಗದಂ*
*ವೃಜಿನ ಕಾರಿಣಾಂ, ವರ್ಜಿತಾ ಶುಭಮ್*
*ಶರಣ ಪಾಲಕಂ ಶಾಂತರೂಪಿಣಂ–*
*ವರದವೇಂಕಟಾಧೀಶ್ವರಂ ಭಜೇ* 6

*ಕರಿವರೋದ್ಧರಮ್ ಕಂಸಘಾತಿನಂ*
*ಗರುಡವಾಹನಂ ಗೋಪಿಕಾಲಯಮ್*
*ಧರಣಿ ಮಂಡಲಂ ಧೇನುಪಾಲಕಂ-*
*ವರದವೇಂಕಟಾಧೀಶ್ವರಮ್ ಭಜೇ* **7**

*ಜಗತಿವೇಂಕಟಾಧೀಶ್ವರಾಷ್ಟ ಕರ್ಮ್ಣ*
*ಸಕಲ ಭಾಗ್ಯದಂ ಸಂತತ್ತಿ ಪ್ರದಂ*
*ಸ್ಮಿತ ಪಯೋನಿಧೇ ಸಂಶ್ರಿತ ಪ್ರದಂ*
*ಕೃತಮಿದಂ ಮುದಾ ನಂದಪೀರ್ಥದೇ*

*ಇತಿ ವೇಂಕಟೇಶಾಷ್ಟಕಂಸಂಪೂರ್ಣಂ*

# ಶ್ರೀವ್ಯಾಸರಾಜವಿರಚಿತ ಶ್ರೀನಿವಾಸ ಸ್ತೋತ್ರ

*ಪ್ರಾತಃ ಸ್ಮರಾಮಿ ರಮಯಾಸಹವೇಂಕಟೇಶಂ*
*ಮಂದಸ್ಮಿತಂ ಮುಖಸರೋರುಹಕಾಂತಿ ರಮ್ಯಮ್*
*ಮಾಣಿಕ್ಯಕಾಂತಿ ವಿಲಸನ್ ಮುಕುಟೋರ್ಧ್ವ ಪುಂಡ್ರಂ*
*ಪದ್ಮಾಕ್ಷಲಕ್ಷಮಣಿ ಕುಂಡಲ ಮಂಡಿತಾಂಗಮ್* 1

*ಪ್ರಾತಃ ಭಜಾಮಿಕರರಮ್ಯ-ಸುಶಂಖಚಕ್ರಂ*
*ಭಕ್ತಭಯಪ್ರದ-ಕಟಿಸ್ಥಲ ದತ್ತ ಪಾಣಿಮ್*
*ಶ್ರೀವತ್ಸ ಕೌಸ್ತುಭಲಸನ್-ಮಣಿಕಾಂಚನಾಢ್ಯಂ*
*ಪೀತಾಂಬರಂ ಮದನ ಕೋಟಿ-ಸುಮೋಹನಾಂಗಮ್* 2

*ಪ್ರಾತರ್ನಮಾಮಿ ಪರಮಾತ್ಮ ಪದಾರವಿಂದಂ*
*ಆನಂದ ಸಾಂದ್ರನಿಲಯಂ ಮಣಿನೂಪುರಾಢ್ಯಮ್*
*ಏತತ್ ಸಮಸ್ತ ಜಗತಾಮಿತಿ ದರ್ಶಯಂತಂ*
*ವೈಕುಂಠ ಮತ್ರ ಭಜತಾಂ ಕರಪಲ್ಲವೇನ* 3

*ವ್ಯಾಸರಾಜಯತಿಪ್ರೋಕ್ತಂ ಶ್ಲೋಕತ್ರಯಮಿದಂಶುಭಮ್*
*ಪ್ರಾತಃ ಕಾಲೇ ಪಠೇದ್ ಯಸ್ತು ಪಾಪೇಭ್ಯೋ ಮುಚ್ಯತೇನರಃ* 4

*ಇತಿ ಶ್ರೀಮದ್ ವ್ಯಾಸರಾಜ ವಿರಚಿತಂ ಶ್ರೀನಿವಾಸ ಸ್ತೋತ್ರಂಸಂಪೂರ್ಣಂ*

# ಶ್ರೀನಿವಾಸ ಕಲ್ಯಾಣ

## ( ಪುರಂದರದಾಸ ಕೃತ )

ವೈಕುಂಠಪತಿ ತಾನು। ವೈಕುಂಠವನೆ ಬಿಟ್ಟು, ವೆಂಕಟಾದ್ರಿಗೆ ಹೋಗಿ। ಶ್ರೀಕಾಂತ ನಿಂತ, ಚೋಳನಾಲ್ಕು ಕಡೆಯೂ ನೋಡಿ। ವಲ್ಮೀಕವನೆ ಕಂಡು, ಏಕಾಂತ ಸ್ಥಲವೆಂದು ಬಹುಕಾಲವಲ್ಲಿದ್ದ 1

ಚೋಳ ಭೃತ್ಯಶಿರ। ಒಡೆದಗಾಯವನೋಡಿ. ತಾಳಲಾರದೆಸ್ವಾಮಿ, ಗುರುಗಳ ಕರೆಸಿ, ಹೇಳಿದೌಷಧಮಾಡಿ, ಕ್ರೋಡರೂಪಿಯ ಕಂಡು। ಕೇಳಿ ಸ್ಥಳವನೆ ಕೊಂಡು, ಲೀಲೆತೋರುತಲಿ 2

ಇರುತಿರಲೊಂದಿನ ತುರಗ ಸ್ಮರಿಸುತಲಿ, ತುರಗ ಬರಲು ಕಂಡು। ಮುದದಿತಾನೇರಿ। ಪರಿಪರಿಮೃಗಗಳ ಅಡವಿಯಲಿಕೊಂದು। ಕರುಣಾ ಸಾಗರ ಒಂದು ವನವ ಕಂಡನು 3

ವನದಲ್ಲಿವನಜಾಕ್ಷಿ। ರಾಜಪುತ್ರಿಯಕಂಡು। ಮನಕೆ ಬಂದಂತಾಡಿ ಕಲಹವಾಡಿದರು ವನುಜಪಿತತಾನು, ಅಶ್ವ ಕಳಕೊಂಡು ಘನವನ್ನು, ಗಿರಿಪರಿ ಮಲಗಿದ ಹರಿಯು- 4

ನಗಧರ ಮಲಗಿರಲು ಬಕುಳಾವತಿ ಆಗ, ಬಗೆ ಬಗೆ ಕೇಳಲು ಶೋಕದಿ ಘುಡಿದ ಗಗನರಾಜನ ಪುತ್ರಿ ಪದ್ಮಾವತಿಯ ಕಂಡು ಹಗಲು ಇರುಳೂ ಆಕೆ ಮುಖದ ಸ್ಮರಿಸುವೆನು 5

ಅವಳಿಗೋಸ್ಕರವಾಗಿ ಇದ್ದಲ್ಲಿಗೆ ಹೋದೆ ಅವಳಿಂದ ಎನ್ನಶ್ವ ಹತವಾಯಿತಮ್ಮ ಅವಳ ಹೊರತು ಎನ್ನ ಪ್ರಾಣನಿಲ್ಲದು, ಅವಳ ಘಟನೆ ನೀನು ಮಾಡಬೇಕಮ್ಮ 6

ಅಂದ ಮಾತನು ಕೇಳಿ ಬಕುಳಾವತಿ ಆಗ, ಆನಂದದಿ ರಾಜನ ಪೂಪುರಕೆ

ತೆರಳಿದಳು। ಸುಂದರಿಯರ ಕಾರ್ಯ ಸ್ಥಿರವಾಗದೆಂದು ಚೆಂದುಳ್ಳ ಸ್ತ್ರೀಯರೂಪ ಧರಿಸಿದನು 7

ಕೊರವಂಜಿತಾನಾಗಿ, ನೃಪನಪುರಕ್ಹೋಗಿ, ಧರಣಿದೇವಿಯ ಮುಂದೆ, ಶಕುನ ಹೇಳಿದನು, ತಿರುಗಿ ಬರಲು ರಾಜ, ಮಗಳ ಕೊಡುವೆನೆಂದು, ಹರಿಗೆ ನಿಶ್ಚಯ ಮಾಡಿ, ಶುಕರ ಕಳುಹಿದನು 8

ತಾಪಸೋತ್ತಮ ಪತ್ರವ ಕೊಡಲು, ಶ್ರೀಪತಿ ತಾನೋದಿ ಬೆನ್ನಿಂದೆ ಬರೆದ, ಅಮರಾವಂದ್ಯ ತಾನು, ಸುರಸ್ತೋಮವ ಕರೆಸಿ, ಈ ಪರಿ ವೈಭೋಗ ಮಾಡಿದ ಹರಿಯು [illegible]

ಆಕ್ಷಣದಲ್ಲಿ ತನ್ನ, ತರುಣನ ಕರೆಸಿ, ಇಕ್ಷು ಚಾಪನ ಮಾತೆ, ಬಳಿಗೆ ಪೋಗೆಂದ। ತಕ್ಷಣದಲ್ಲಿ ಸೂರ್ಯ ಹೋಗಿ ನಿಲ್ಲಲು ಆ ಕ್ಷೆಮವನೆ ಕೇಳಿ ತೆರಳಿ ಬಂದಳು 10

ಬಂದ ಸತಿಯ ಕೂಡಿ ಮಂದಿರಕೆ ಪೋಗಿ, ಹಿಂದೆ ಹೇಳಿದ ವಾಕ್ಯ ನಡೆಸೆಂದ ಹರಿಯು, ಸಂದೇಹವಿಲ್ಲದೇ ಸ್ವಾಮಿ ನಡೆಸೆಂದು ಇಂದಿರಾ ದೇವಿಯು ನುಡಿದಳು ಹರಿಗೆ 11

ಸ್ವಸ್ತಿವಾಚನಮಾಡಿ ಕುಲದೇವರಾನಿಟ್ಟು, ಪ್ರಸ್ತವ ಮಾಡಿದ ದ್ವಿಜರ ಸ್ತೋಮಕ್ಕೆ, ಮರು ದಿನ ಲಕ್ಷ್ಮೀಶ ರಾಜನ ಪುರಕ್ಕೆ, ಸುರಸ್ತೋಮನು ಕೂಡಿ ತೆರಳಿ ಬಂದನು 12

ಬರುವ ಕೃಷ್ಣನ ಕಂಡು ಶುಕಮುನಿ, ಸ್ತುತಿಸಿ ಹರಿಗೆ ಭೋಜನವನ್ನು ಮುದದಿ ಮಾಡಿಸಿದ ಅಕಳಂಕ ಮಹಿಮನು, ಬಂದ ವಾರ್ತೆಯ ಕೇಳಿ ಸಕಲ ಜನರ ಕೂಡಿ ಕರೆ ಬಂದರಾಜ 13

ಮುದದಿಂದ ಎದುರ್ಗೊಂಡು, ಪರಿಮಳ ಪೂಸಿ, ಸದಮಲ ಹೃದಯನ್ನ ಕರತಂದರುಮನೆಗೆ, ಪದ್ಮನಾಭನ ಪೀಠದಲ್ಲಿ ಕುಳ್ಳಿರಿಸಿ, ಮಧುರ ಮಾತಿಲಿ ತನ್ನ ತರುಣಿ ಒಡಗೂಡಿ 14

ಹೇಮ ಕುಂಭಗಳಿಂದ ದ್ವಿಜರಕ್ಕೈಯೊಳು ಸ್ವಾಮಿ ಪುಷ್ಕರಿಣಿಯ ತೋಯವನು ತರಿಸಿ, ಹೇಮ ತಟ್ಟೆಯಲ್ಲಿ ಸ್ವಾಮಿಪಾದವನಿಟ್ಟು ಪ್ರೇಮದಿಂದ ಭೀಷೇಕ ಮಾಡಿದ ರಾಜ 15

ಚಿನ್ನದ ಕಿರೀಟ, ಆಭರಣವನ್ನಿಟ್ಟು ಕನ್ಯಾದಾನವು ತಾ ಮಾಡಿ ಧನ್ಯನಾದ ತನ್ನ ಮಗಳ ಶ್ರೀನಿವಾಸನಿಗೊಪ್ಪಿಸಿ ಉನ್ನತ ಪದವಿಯ ಚೆನ್ನಾಗಿ ಪಡೆದ 16

ಮಾವನಪ್ಪಣೆ ಪಡೆದು, ವಸುದಾನ ಗೊಸ್ತ್ರವಕೊಟ್ಟು, ಭಾವ ಶುದ್ಧದಿ ತನ್ನ ಮಾವಗೊಂದಿಸಿದ, ಯಾವಾಗ ಕರೆದರೂ ಬರುವೆ ತಾನೆಂದು। ಪಾವನ್ನಮಾಡೆಂದು ಧರುಣಗೊಂದಿಸಿದ 17

ಅಪ್ಪಗೋಪುರ ಏರಿ ಕಣ್ಣಿಟ್ಟುನೋಡತಲಿ। ಎಷ್ಟು ಹೇಳಲಿ ಈಕೆ ಸುಕೃತ ಫಲಕೊವೆಂದು, ಅಜರುದ್ರಮೊದಲಾದ ಸುರರು ದ್ವಿಜರೆಲ್ಲ। ಸುಜನ ದಂದಣ ಏರಿ ಪುರಕ್ಕೆ ಸಾಗಿರದರು. 18

ಮೂರು ತಿಂಗಳು ಮೀರಿಗಿರಿಗೆ ಪೋಗುವೆನೆಂದು ಧೀರತಾನಿಂತನೆ ಕುಂಭಪುತ್ರರಾಶ್ರಮದಿ, ಧರೆಯೊಳು ಅಣಕೇರಿ। ಸುರಪತಿ ಪ್ರಿಯನಾದ, ಸುಗುಣ ವೆಂಕಟನ್ನಪುರಂದರವಿಠಲ

# ವೆಂಕಟೇಶ ಸ್ತುತಿ

ಕೂರ್ಮನ ಪರಮ ಪಾವನ ದುರುಳ ಹರಣಾ। ಉರುಗಗಿರಿ ವಾಸಾ। ಭಕ್ತಿಂದ ಕೂರ್ಮನು ಬಂದ, ಭೃಗುಮುನಿಯಿಂದ ಒದೆಯಲಿ ಛಂದ। ಇಂದಿರೆ ಪೋದಳೆನಗೆಂದ ॥ ಮೇದಿನಿತಿರುಗುತ್ತ ಗಿರಿಯಲಿ ವಾಸಮಾಡಿದ ಗೋವಿಂದಾ। ಗೋಪಾಲಾಜಾಲ। ವಿಮಲ ಕಪೋಲ। ಸುಚರಿತ ನೀಲಾ। ವೃಷಭಾಚಲದಲ್ಲಿ ಆಲಯ ಮಾಡಿದ ಕಲಿಕಾಲಾ। ವಾಲ್ಮೀಕಾ ॥ ವಾಲ್ಮಿಕಾ ತಿಳಿಸಲಿ ಲೋಕಾ ನಿಲಿಸಲಿ ನಿಲಿಸಲಿ ನಿಲುಕ। ಇಂದಿರೆಗಾಗಿ ಲೋಕೇಶನು ಹುಡುಕಿದನೆ ಭೂಲೋಕ। ಕಂಡನೆ ಭೂಪಚೋಳನ್ನ। ಗೋಪಾಲನ್ನ ಪ್ರತಾಪ। ಪಿಶಿಚಾಗೆ ನುತಲಿ ರಾಜಗೆ ತಾ ಕೊಟ್ಟನೆ ಶಾಪ। ಔದುಂಬರ ವೃಕ್ಷಕೆ ಬಂದು। ಔಷಧ ಹಚ್ಚುತನಿಂದು। ದೂರದಲ್ಲಿ ಆತನ ಕಂಡು। ಪತಿಯಾರು ಎನುತಲಿ। ಬಳಿಯಲ್ಲಿ ತಾ ಬಂದೂ ನಿಂತು, ಎಷ್ಟು ಎಷ್ಟು ವೈಕುಂಠವ ಬಿಟ್ಟು, ಈ ಪರಿ ಆಯಾಸಬಟ್ಟು, ಮುಕ್ತ ಕೇಳಿದನೆ ತಾನಷ್ಟು, ತನ್ನಲ್ಲಿರುವ ಬಕುಳೆ ಮಾಲಿಕೆಯ ಸೇವೆಗಾಗೇ [illegible] ಕೊಟ್ಟು। ಮನಸ್ವೀಮನಸ್ವೀ, ಅಶ್ವವಯೇರಿ। ವನಸಂಚರಿಸಿ, ವನದೊಳ ಗಜೇಂದ್ರ ತಾನಮಸ್ಕರಿಸಿ। ವನದೊಳುಳ್ಳ ಸ್ತ್ರೀಯರ ಬಳಿ ತಾ ಸಂಚರಿಸಿ, ನೋಡೀ ನೋಡೀ ಎಲ್ಲಾ ವಧುಗಳ ಕೂಡೀ ಕಲ್ಲುಗಳಿಂದ ಈಡ್ಯಾಡಿ, ಭಕ್ತಿಯ ಮಾಡಿ ಗೀಯಾಳುಳ್ಳ ವಾಲ್ಮೀಕದೊಳು ತಾಶಯನವ ಮಾಡಿ ಕುಣಿ ಕುಣಿದಾಡಿ ಮಗಳ ಮುಖವ ನೋಡೀ ಪ್ರೀತಿಯಿಂದ ಮಾತನಾಡೀ ಧರ್ಮ ದೇವತೆಯ ಕೊಂಡಾಡಿ ಬಕುಳೆ ಎದುರಿಗೆ ಲಗ್ನ ಪತ್ರಿಕೆಯನ್ನು ಕಳಿಸಿ, ಶುಕನ ಕಳಿಸಿ, ಅಗಾಧಾ ಅಗಾಧಾ ಪತ್ರಿಕೆ ನೋಡಲು ಪೋದ ಲಿಖಿತ ಬರೆದನೆ ಕ್ಷೇಮಾಲಿಂಗನೆ ತೃಪ್ತಿಯ ಬಡಿಸಿ, ತಾಶರಗೊಡ್ಡಿ ಬೇಡಿ ಈಗಾಗ ಈಗಾ ಸುರಮುನಿಗಳು ಬರಲಾಗ। ಮಂಗಳ ಕಾರ್ಯಗಳಿಂದ ಲೋಕಮಾತೆಯ ಕರೆಸೀದನೀಗಾ। ಕುಲದೇವತೆಯ। ವಶಿಷ್ಟರಿಂದಲೆ ವರಹನ ಚರಣದಿ ಸ್ಥಾಪನೆ ಮಾಡಿದ ಗೋವಿಂದಾ, ಭೃಗುಣಾ ಭೃಗುಣಾ ಭಲಗುಣ ರಾತ್ರೀಲಿ ಜಾಗರಣಾ। ಪದ್ಮಾವತಿ ಪಾಣಿ ಗ್ರಹಣ। ತಾನಿಟ್ಟಾನೇ ಸರ್ವಾಭರಣಾ, ಕಟ್ಟಿದ ಮಂಗಳ ಸೂತ್ರ ಕರುಣಾ। ಈ ವಿಧ ಕೇಳಿದವರಿಗೆ ಪುರಂದರ ವಿಠಲಾ ಕರುಣಿಸಿ ಕೊಡುವನು ಸನ್ಮುಕ್ತಿ''

# ಶ್ರೀನಿವಾಸ ಕಲ್ಯಾಣ ಹಯವನದ ಮುದ್ರಿಕೆ

ಸ್ತ್ರೀಯರೆಲ್ಲರು ಬನ್ನಿರೆ, ಶ್ರೀನಿವಾಸನ ಪಾಡಿರೆ, ಜ್ಞಾನಿಗುರುಗಳ ಗೊಂದಿಸಿ ಮುಂದಿನ ಕಥೆಯ ಪೇಳುವೆ :

ಗಂಗಾ ತೀರದಿ ಋಷಿಗಳು ಬಂದು ಯಾಗವ ಮಾಡುತಿರೆ, ನಾರದ ಮುನಿ ಬಂದು। ಯಾರಿಗೆ ಫಲವೆಂದು ಕೇಳಿದನು। ಅರಿತು ಬರಬೇಕೆಂದು ನಾರದ ಮುನಿಯುತೆರಳಿದ, ವೇದಗಳನೆ ಓದುತ್ತಾ। ಹರಿಯ ಕೊಂಡಾಡುತ। ಅಲ್ಲಿರುವ ಬ್ರಹ್ಮನ ನೋಡಿದಾ। ಕೈಲಾಸಕೆ ಪೋಗಿ, ಕೊಂಬಕಹಳೆಗಳಿಂದ, ಪಾರ್ವತಿಯ ಕಲೆತಿರುವವನು ಕಂಡು। ಸೃಷ್ಟಿಯೊಳಗೆ ಲಿಂಗ ಶೇಷವಾಗಲೆಂತೆಂದ। ವೈಕುಂಠಕ್ಕೆ ಬಂದು ವಾಸುದೇವನು ಕಂಡನೆ। ಕೆಟ್ಟ ಕೋಪದಿಂದ ಒದೆಯಲು ಎಷ್ಟು ನೊಂದಿತೆಂದು ಹರಿ ಥಟ್ಟನೆ ಬಿಸಿ ನೀರಿನಿಂದ ಪಾದಗಳ ತೊಳೆದನು। ಹರಿಯ ಕೂಡೆ ಕಲಹ ಮಾಡಿ ರಮೆ ಕೊಲ್ಲಾಪುರಕ್ಕೆ ಹುತ್ತದೊಳಗೆ ಹತ್ತು ಸಾವಿರ ವರ್ಷ ಗುಪ್ತವಾಗಿದ್ದನು. ಗೋವು ಕಾಯ್ದು ಗೊಲ್ಲನಂತೆ ಗೋಪಿ ಸತಿಯು ಹೊರಟಳು. ತೊಲಿ ಹೊರಿನ್ನು ಬಾಳ್ವುದು। ಕೊಡದ ಹಾಲು ಕರವುದು। ಪ್ರೀತಿಯಿಂದ ಕೊಂಡನೆ ತನ್ನ ಮನೆಗೆ ಪೋದನು। ಒಂದು ದಿನ ಕಂದಗೆ ಚೆಂದಂದ ಹಾಲು ಕೊಡಲಿಲ್ಲ ಬಂದು ನಿಂತು ರಾಯನ ಮಡದಿ ಕೇಳಿದಳು। ಧೇನು ಮುಂದೆ ಮಾಡಿಕೊಂಡು ಹಿಂದೆ ಗೋಪ ನಡೆದನು. ಕಾಮಧೇನು ಹಾಲು ಕರೆದು ಹರಿಯ ಶಿರದಿ ಬಿಟ್ಟಿತು. ಕಷ್ಟ ಬಂದಿತೆಂದು ಪೆಟ್ಟು ಬಡಿಯೆ ಹೋದನು, ಕೃಷ್ಣ ಮನದಿ ಯೋಚಿಸಿ ಕೊಟ್ಟ ತನ್ನ ಶಿರವನ್ನು, ಏಳುತಾಳು ಮರದ ಉದ್ದ ರಕ್ತ ಏಕವಾಗಿ ಹರಿಯಿತು। ನೋಡಿ ಗೋಪ ಸ್ವರ್ಗ ಸೇರಿದ, ಏನು ಕಷ್ಟವಿಲ್ಲ? ಯಾವ ಪಾಪಿ ಮಾಡಿದ? ತಂದೆ ತಾಯಿ ಬಂಧು ಬಳಗ ನಮಗೆ ಇಲ್ಲವೆಂದು ಇಷ್ಟ ಕಷ್ಟ ಕೊಟ್ಟ ಕಾರಣ ದುಷ್ಟ ಪಿಶಾಚಿಯಾಗೆಂದ, ಅಷ್ಟು ಕಲಿಯುಗ ಮುಗಿಯುವ ತನಕ, ಪೆಟ್ಟುತಾಳಲಾರದೆ ಬೃಹಸ್ಪತ್ಯಾಚಾರ್ಯರ ಕರೆಸಿದ, ಉದಯ ಕಾಲದಲ್ಲಿದ್ದು

ಗುಪ್ತವಾಗಿ ಪೋದನೆ, ವರಹ ರೂಪಿಕಂಡು ಮಾತಾಡಿದನೆ, ಇರುವುದಕೆ ನಮಗೆ ಸ್ಥಳ ಏರ್ಪಾಡಾಗಬೇಕೆಂದು ನೂರು ಹೆಜ್ಜೆ ಭೂಮಿ ಕೊಟ್ಟರೆ ಮೊದಲ ಪೂಜೆ ನಿಮಗೆಂದ। ಪಾಕ ಮಾಡುವುದಕ್ಕೆ ಬಕುಳೆ ಬಂದಳು। ಭಾನು ಕೋಟಿ ತೇಜನು ಬೇಟೆಗಾಗಿ ಹೊರಟನು। ಪಟ್ಟವಾಳಿಯುಟ್ಟು। ಪಟ್ಟಿ ಪೀತಾಂಬರ ಹೊದ್ದನು ಢಾಳು ಕತ್ತಿಗೆ ಬಿಡಲು ಸಿಕ್ಕಿ ಜೋಡು ಕಾಲಿಗೆ ಮೆಟ್ಟಿದ। ಅಂಗುಲಿಗೆ ಉಂಗುರಗಳ ರಂಗ ಶೃಂಗಾರವಾದನು, ಕೈಲಿ ಅಶ್ವ ಹಿಡಿದು ಕನ್ನಿಕೆಯನ್ನು ನೋಡಿದ। ಕನಕ ಭೂಷಣವಾದ ಹಯಕೆ ಕಮಲನಾಭನೇರಿದ। ಕರಿಯನಟ್ಟಿ ಹರಿಯು ಬರಲು ಕಾಂತೆರೆಲ್ಲರು ಕಂಡರು। ಯಾರು ಇಲ್ಲಿಗೆ ಬರುವುದು? 'ದೂರ ಹೋಗು' ಎಂದರು, ನಾರಿಯರು ಇರುವ ಸ್ಥಳದಿ ಏನು ಕಾರ್ಯವೆಂದರು? ಎಷ್ಟು ಹೇಳಿದರೂ ಕೃಷ್ಣ ಕುದುರೆಯನ್ನು ಬಿಟ್ಟನು, ಅಷ್ಟು ಮಂದಿರೆಲ್ಲ ಸೇರಿ ಪೆಟ್ಟುಕಲ್ಲಲಿ ಹೊಡೆದರು, ಕಲ್ಲು ಮಳೆಯ ಕರೆದರಾಗ, ಕುದುರೆ ಕೆಳಗೆ ಬಿದ್ದಿತು, ಕೇಶಬಿಚ್ಚಿವಾಮದೇವ ಶೇಷ ಪರ್ವತ ಏರಿದ, ಪರಮಾನ್ನ ಮಾಡಿದೆ, ಉಣ್ಣೋಬೇಗ ಎಂದಳು, ಅಮ್ಮನನಗೆ ಅನ್ನಬೇಡ, ಎನ್ನ ಮಗನೆ ವೈರಿ ಕಣ್ಣಿಲ್ಲದಂತೆ ಯಾಕೆ ನೀರ್ಮಾಣ ಮಾಡಿದ? ಯಾವ ದೇಶದವಳು ಆಕೆ ಎನಗೆ ಹೇಳು ಎಂದಳು, ನಾರಾಯಣ ಪುರಕೆ ಪೋಗಿ ರಾಮಕೃಷ್ಣರ ಪೂಜಿಸೇ ಗುಂಡುಮಣಿಯ ಕೊರಳೊಳು ಹಾಕಿ ಕೂಸಿನ್ನೆ ಕೊಂಕುಳಲ್ಲೆತ್ತಿ ಧರಣಿ ದೇವಿಗೆ ಕಣಿಯ ಹೇಳಿ ಗಿರಿಯಲ್ಲಿ ಸೇರಿದ, ಬಾಲೆರೆಲ್ಲ ಕೂಡಿಕೊಂಡು ಬಕುಳೆ ಮಾತಾಡಿದಳು, ತಂದೆ, ತಾಯಿ, ಬಂಧು ಬಳಗಹೊನ್ನು ಹಣ ಉಂಟೆಂಬಿರಿ, ಕನ್ನಿಕೆ ಏಕೆ ದೊರೆಯಲಿಲ್ಲ? ಚಿಕ್ಕವಳಿಗೆ ಮಕ್ಕಳಿಲ್ಲ, ಮತ್ತೆ ಮದುವೆಯಾಗ ಬೇಕು, ಗುರುಗಳನ್ನು ಕರೆಸಿದ, ಮದುವೆ ವಾಲೆ ಬರೆಸಿದ, ಬೃಹಸ್ಪತ್ಯಾಚಾರ್ಯರನ್ನು ಕರೆಸಿ ಲಗ್ನ ಪತ್ರಿಕೆ ಬರೆಸಿದ, ವಲ್ಲಭೆಯನ್ನ ಕರೆತರುವುದಕ್ಕೆ ಕೊಲ್ಲಾಪುರಕ್ಕೆ ಹೋಗೆಂದು ಬ್ರಹ್ಮ ಮೊದಲು ಮಾಡಿಕೊಂಡು ಬೇಗ ಹೊರಟು ಬಂದಳು, ಕನಕ ಮಣಿ ಕನ್ಯಾರತ್ನ ಕನ್ಯಾದಾನವ ಮಾಡಿದ, ಕನಕ ಭೂಷಣವಾದ ಕಾಂತೆ ಕೈಗೆ ಕಂಕಣವ ಕಟ್ಟಿದ ಪಂಕಜಾಕ್ಷನು ಪದ್ಮಾವತಿಗೆ ಮಾಂಗಲ್ಯವನ್ನು ಕಟ್ಟಿದ। ಶಂಕೆ ಇಲ್ಲದೆ ಹಣವನ್ನು ಸುರಿದು

ವೆಂಕಟೇಶನ ಕಳಿಸಿದ। ಶ್ರೀನಿವಾಸನ ಮದುವೆ ನೋಡಬನ್ನಿರೆ ಸ್ತ್ರೀಯರೆಲ್ಲರೂ, ಪದ್ಮಾವತಿಯ ಮದುವೆ ನೋಡಬನ್ನಿರೆ, ಕೋಟಿ ತಪ್ಪುಗಳ ಕ್ಷಮಿಸಿ ಪಕ್ಷಿವಾಹನ ಸಲಹೆನ್ನನು, ಭಕ್ತಿಯಿಂದ ಹೇಳಿ ಕೇಳಿದವರಿಗೆ ಮುಕ್ತಿ ಕೊಡುವ ಶ್ರೀ ಹಯವದನನು.

# ತಿರುಪತಿ ಶ್ರೀನಿವಾಸನ ಸ್ತೋತ್ರ

ಅಪ್ಪವೆಂಕೋಬನ ನೇತ್ರದಲ್ಲಿ ನೋಡಿ ಪವಿತ್ರಳಾದೆನು ಇಂದಿಗೆ ॥ಪ॥
ತಪ್ಪುಗಳೆಲ್ಲ ನಿನಗರ್ಪಿಸಿದೆ ನೀನೀಗ ಒಪ್ಪಿಕೋ ಬೇಕೋ ತಿಮ್ಮಪ್ಪ
ಕರುಣಾನಿಧಿಯೇ ॥ಅ॥ಪ॥

ಬೆದರದೆ ಭೃಗುಋಷಿ ಒದೆಯೆ ಪಾದಗಳಿಂದೆ ಎದಿಯ ಮ್ಯಾಲಿರುವ ಲಕ್ಷ್ಮೀ! ಕದನ ಮಾಡುತಲೆ ಕೊಲ್ಹಾಪುರಕ್ಕೆ ನಡೆತಂದು ಒದಗಿ ವೈಕುಂಠ ಬಿಟ್ಟು, ಯದುನಾಥ'ಯಾರಿಲ್ಲದಂತೆ ಗುಡ್ಡವ ಸೇರೆ, ಇದು ನಿನಗೆ ಸದನವಾಯಿತೋದೇವ 1

ಹುತ್ತಿ ನೊಳಡಗಿ ನೀ ಗುಪ್ತದಿಂದಿರುತಿರಲು ಉತ್ತಮ ಗೋವು ಬಂದು, ನಿತ್ಯದಲಿ ಕ್ಷೀರವನು ಕರಿಯೆ ಗೋವಳರಿಂದೆ ನೆತ್ತಿಯ ನೊಡಕೊಂಡು, ಸಿಟ್ಟಿನಿಂದಲಿ ಚೋಳರಾಜನಿಗೆ, ಶಾಪವನ್ನು ಕೊಟ್ಟು ಕಿರೀಟವನು ಇಟ್ಟು ಮೆರೆಯುವ ದೇವ 2

ಮಾಯುರಮಣನೆ ನಿನ್ನ ಘಾಯಕೌಷಧ ಕ್ಕೋಗಿ ಭೂರಮಣವರಹನಿಂದೆ, ಮೂರುಪಾದ ಭೂಮಿ ಕೊಟ್ಟರೆ ಸಾಕೆಂದು ಪಾಯದಿಂದ ವ್ಯಾಪಿಸಿ, ತಾಯಿ ಬಕುಳಾದೇವಿಯಿಂದ ಪೂಜೆಯಗೊಂಬೋಶ್ರೀ ಅರಸು ನಿನಗೆ ಸರಿಯೇದೇವ 3

ನಾಟಕಾಧಾರಿ ಕಿರಾತರೂಪವ ಧರಿಸಿ ಬ್ಯಾಟೆಗೆನುತಲಿಪೋಗಲು, ತೋಟದಲ್ಲಿ ಚೆಲ್ವ ಪದ್ಮಾವತಿಯ ಕಡೆಗಣ್ಣ ನೋಟದಲ್ಲಿ ಮನಸೋಲಿಸಿ, ಬೂಟಕತನದಿ ಜಗಳಾಟವನ್ನೆ ಆಡಿ ಪಾಡುಬಟ್ಟು ಕಲ್ಲಿನೇಟು ತಿಂದೆಯೋ ದೇವ 4

ಗಡಗಡನೆ ನಡುಗುತಲಿ, ಕುದುರೆಯ ಕಳಕೊಂಡು ಪದುಮಾವತಿಯ ಬದಿಯಲಿದ್ದ ಬಕುಳ ಮಾಲಿಕೆಗೆ ಬೋಧಿಸಿ ಕಳುಹಿಸಿ ಆಕಾಶನಲ್ಲಿ ಬೆದುರ

ಮಾತಿನ ಚಪಲ ಕೊರವಂಜಿ ನೀನಾಗಿ ಕಣಿಯ ಹೇಳಲು ಎಲ್ಲಿ ಕಲಿತಿಯೋ ಮಹಾದೇವ 5

ಬಂಧುಬಳಗವ ಕೂಡಿ, ಭಾರಿಸಾಲವ ಮಾಡಿಕೊಂಡು ಕರವೀರದಿಂದೆ ಅಂದದಲ್ಲಿ ಕರೆಸಿ ಕಾಣುತಲೆ ಲಕ್ಷ್ಮಿಯನಪ್ಪಿಕೊಂಡು ಪರಮ ಹರುಷದಿಂದ ಮಂದಗ ಮನೆಯೆ ನಿನ್ನ ಮಾತಲಾಲಿಸಿ ಮಾಡಿಕೊಂಬೆ ಪದ್ಮಾವತಿಯ ಅಂದೆಲೊ ಎಲೆ ದೇವ 6

ಆಕಾಶರಾಜ ಅನೇಕ ಹರುಷದಿಂದ ಮಾಡೆ ತಾಕನ್ಯಾದಾನವನು ಹಾಕಿದ ರತ್ನ ಮಾಣಿಕದ ಕಿರೀಟವನ್ನು, ಬೇಕಾದಾಭರಣ ಭಾಗ್ಯ ಸಾಕಾಗದೇನೋ ಬಡವರ ಕಾಡಿಬೇಡುವುದು. ಶ್ರೀಕಾಂತ ಸರಿಯೆ ನಿನಗೆ ದೇವ 7

ಹೇಮಗೋಪುರದಿ ವಿಮಾನ ಶ್ರೀನಿವಾಸ ದೇವರನು ನೋಡಿ ನಮಿಸಿ ಕಾಮಿಸಿ ಕಂಡೆ ಹೊನ್ನೊಸ್ತಿಲು ಗರುಡ ಗಂಭದಾಸುತ್ತ ಪ್ರಾಕಾರವು ಸ್ವಾಮಿ ಪುಷ್ಕರಿಣಿ ಸ್ನಾನವ ಪಾನವ ಮಾಡಿ ನೋಡಿದೆನು ನಿನ್ನ ಭಕುತರನು ದೇವ 8

ಪನ್ನಗಾದ್ರಿ ವೆಂಕಟನ್ನ ರಥ ಶೃಂಗಾರ ವರ್ಣಿಸಲಳವೇ ನಮಗೆ ಕಣ್ಣಾರೆ ಕಂಡೆ ಗರುಡೋತ್ಸವದಲಂಕಾರ ಇನ್ನೆಲ್ಲು ಕಾಣೆ ಜಗದಿ 9

ಪಾದದಲೊಪ್ಪೊ, ಪಾಗಾಡ ರುಳಿಗೆಜ್ಜೆ ಮೇಲೊಲಿವ ಪೀತಾಂಬರ

ನೀಲ ಮಾಣಿಕದ ಉಡಿದಾರವೊ ವೈಜಯಂತಿ ಮಾಲೆ ಶ್ರೀ ವತ್ಸಧಾರ ಮೇಲಾದ ಸರಿಗೆ ಸರ ಪದರವೊ, ಕಮಲಾದಳಾಯ ತಾಕ್ಷನ ನೋಡಿದೆ ದೇವ 10

ಕರಗಳಲಿಟ್ಟು ಕಂಕಣ ಕಡಗ ಭುಜಕೀರ್ತಿ ವರಶಂಖ ಚಕ್ರಧಾರೀ ಗಿರಿಯೆ ಭೂವೈಕುಂಠವೆಂದು ತೋರುತ ನಿಂತ ಶಿರದಿಕಿರೀಟ ಧರಸಿ ಬಿಳಿಯ ತ್ರಿನಾಮ ಭೀಮೇಶಕೃಷ್ಣನ ಮುಖದಿ ಹೊಳೆವ ಮೂರ್ತಿಯ ನೋಡಿದೆ ದೇವ 11

# ಶ್ರೀವೆಂಕಟೇಶ ಕಲ್ಯಾಣ ಅಶ್ವಧಾಟಿ

ಬಾಗಿ ಭಜಿಸಿರೋ ವೆಂಕಟಾದ್ರಿ ಒಡೆಯನಾ
ಸಂಕಟಂಗಳಾ ಕಳೆದು ಕಾಯ್ವದೇವನಾ 1

ಹಿಂದೆ ಋಷಿಗಳೂ ಸಂದೇಹ ಬಡುತಲೀ
ಬ್ರಹ್ಮಲೋಕ ಕೈಲಾಸ ತಿರುಗಿ ಬಂದರೂ 2

ಹರಿಯೆ ಸರ್ವೋತ್ತಮನೆಂಬ ತತ್ವವಾ।
ಜಗಕೆ ಸಾರಿದರು ಭೃಗುಮುನಿವರೇಣ್ಯರು 3

ಪ್ರೇಮ ಕಲಹಮಾಡಿ ಶಿರಿವೈಕುಂಠ ಬಿಟ್ಟಳು
ಕೊಲ್ಲಾಪುರದ ಜನರ ಸಂತೈಸೆ ನಿಂತಳು 4

ಏಳುಗಿರಿಗೆ ಹರಿಯು ತಾನಿಳಿದು ಬಂದನು
ಹುತ್ತಿನಲ್ಲಿ ಗುಪ್ತವಾಗಿ ವಾಸವಿದ್ದನು 5

ಹರಿಯ ಸೇವೆ ಮುದದಿ ಮಾಡಬೇಕೆನುತಲೀ
ಗೋಪಿ ಸೊಸಿಯು ಗೋವು ಸಹಿತ ಬಂದು ನಿಂತಳು 6

ಚೋಳರಾಜ ತನ್ನ ಕಂದಗಾಗಿ ಕೊಂಡನು
ಹರುಷದಿಂದಗೋವನ್ನು ತಂದು ಕೊಂಡನು 7

ಒಂದು ದಿವಸಕಂದಗ್ಹಾಲು ಇಲ್ಲವೆಂದು
ಧೇನು ಮುಂದೆ ಮಾಡಿಕೊಂಡು ಗೋಪ ತೆರಳಿದಾ 8

ಆಗ ಗೋವು ಹರಿಯ ಶಿರದಿ ಹಾಲು ಕರೆಯಿತೊ
ಗೋಪ ಸಿಟ್ಟಿನಿಂದ ಹೊಡೆಯ ಕೊಡಲಿ ಎತ್ತಿದಾ 9

ಹರಿಯ ಶಿರಕೆ ಪೆಟ್ಟು ತಗಲಿ ರಕ್ತಹರಿಯಿತು
ಕಲಿಯುಗ ಮುಳುಗುವ ತನಕ ರಾಜಗೆ ಶಾಪತಗುಲಿತು 10

ಪೆಟ್ಟು ವಾಸಿಗಾಗಿ ಹರಿ ವೈದ್ಯ ಮಾಡಿದನು
ವರಹ ರೂಪಕಂಡು ಸ್ಥಳವ ಕೇಳಿದನು 11

ಸ್ಥಳಕ್ಕೆ ಬೆಲೆ ಮೊದಲು ಪೂಜೆ ವರಹಗೆಂದನು
ಆಕೆ ಬಕುಳೆ ಶ್ರೀನಿವಾಸನ ಸೇವೆಗೆ ಬಂದಳು 12

ಕುದುರಿ ಏರಿ ವೇಂಕಟೇಶ ಬೇಟೆಗ್ಹೊರಟನು
ರಾಜಪುತ್ರಿಯ ಕಂಡು ಮೋಹಪಟ್ಟನು 13

ಘಟನೆ ಮಾಡಬೇಕೆಂದು ಬಕುಳೆ ಹೊರಟಳು
ಕೊರವಂಜಿ ತಾನಾಗಿ ಧರಣಿಗ್ಹೇಳಿದನು 14

ಧರಣಿ ತನ್ನ ಪತಿಗೆ ಹೇಳಿ ಸ್ಥಿರವ ಮಾಡಿದಳು
ಗುರುಗಳಪ್ಪಣೆಯಂತೆ ರಾಜನ ಮಂದಿರದಲ್ಲಿ 15

ಹರಿಗೆ ಒಪ್ಪಿಗೆಯಾಗಿ ಲಗ್ನ ಪತ್ರಿಕೆ ಬರೆದರು
ಬ್ರಹ್ಮ ಮೊದಲಾದ ಪರಿವಾರ ಬಂದಿತು 16

ವೆಂಕಟೇಶ ಪದ್ಮಾವತಿಯ ಮದುವೆಗಾಗಿ
ಆಗ ಲಕ್ಷ್ಮಿ ದಿವಾಕರನ ಜೊತೆಗೆ ಬಂದಳು 17

ಭಕ್ತರಾದ ಶುಕರು ಕೊಟ್ಟ ಆಹಾರವನುಂಡು
ತೃಪ್ತಿಯಿಂದ ತೇಗಿ ಎಲ್ಲರ ತೃಪ್ತಿ ಪಡಿಸಿದನು 18

ಕಲ್ಯಾಣ ಮಂಟಪದೊಳಗೆ ಹರಿಯ ಪಾದ ತೊಳೆದನು
ಕನ್ಯಾದಾನವ ಮಾಡಿ ರಾಜ ಧನ್ಯನಾದನು 19

ಮುತ್ತಿನ ಮಂಟಪದೊಳಗೆ ವೆಂಕಟೇಶ ಕುಳಿತನು
ಮುದ್ದು ಪದ್ಮಾವತಿಗೆ ಮಾಂಗಲ್ಯ ಕಟ್ಟಿದನು 20

ಭಕ್ತಿಯಿಂದಯಿದನು ಪಾಡಿಕೇಳಿದವರಿಗೆ
ಕಪಿಲನಾಮಕ ಪರಮಾತ್ಮನು ಮುಕ್ತಿಕೊಡುವನು 21

## ನಾ ನಿನ್ನ ಅರಸಿ ಬಂದೇ

ಭಗವಂತನೇ ನಿನ್ನ ನಾನರಸಿ ಬಂದೇ ||ಪ||
ಖಗವಾಹನ ಹರೀ ಶ್ರೀನಿವಾಸನೆ ತಂದೇ || ಪ ||

ಭೃಗುಮುನಿಯು ಕೋಪದಿಂಪಾದದಿಂತಾಡಿಸಲು
ಮುಗುಳು ನಗುತ, ಭೃಗುಮುನಿಯ ಸತ್ಕರಿಸಿದೇ
ವರಲಕ್ಷ್ಮಿದೇವಿಯು ಕೋಪದಿಂತೆರಳೆಕೊಲ್ಲಾಪುರಕೆ
ಹರಿ ನೀನಿಲ್ಲಿಗೆ ಬಂದೆ ಅರಸುತೆ ಸ್ಥಾನವ ಶೇಷಾದ್ರಿಗೇ 1

ಗೊಲ್ಲನಧೇನು ಕರೆಯೆ ನಿತ್ಯವು ಕ್ಷಿರ
ಸಲ್ಲಲಿತಾಂಗ ವಾಸಿಸಿದೆ ವಾಲ್ಮಿಕದಲ್ಲಿ
ಕಂಡಿದ ಚೋಳ ರಾಜನತ್ಯುಗ್ರ ಕೋಪದಲಿ
ತುಂಡರಿಸಲು ಬರೆ ಬೇಗ ನೀತಲೆಯೊಡ್ಡಿದೆ 2

ಹರಿವ ರಕ್ತದ ಧಾರೆ ನೋಡಲಾರದೆ ಚೋಳ
ಶಿರವ ಪಿಡಿದೊಡನೆ ಮೂರ್ಛೆಯನು ಪೋಗಲು
ಶಾಪವನು ನೀಡಿದೆ ಪಿಶಾಚಿಯಾಗೆನು ತವಗೆ
ತಾಪವನು ತಡೆಯದೆ ಬಂದೆ ಬಕುಳೆಯ ಬಳಿಕೆ 3

ಮೃಗಯಾ ವಿಹಾರಕ್ಕೆ ಶೃಂಗಾರದಿಂ ನೀಪೋಗಿ
ಗಗನ ರಾಜನಪುತ್ರಿ ಪದ್ಮಿನಿಯ ಮೋಹಿಸಿ,
ಬಕುಳ ದೇವಿಯನಟ್ಟಿ ಆಕ್ಷಣ ಆಕಾಶರಾಜನ ಪುರಕೆ
ಸುಕುಮಾರಿ ಕೊರವಂಜಿ ರೂಪ ಧರಿಸಿ ನೀಪೋದೇ 4

ಗಗನ ರಾಜನರಸಿಗೆ ಮಗಳ ತಾಪವನರುಹಿ
ಮಿಗಿಲಾಗಿ ಸರ್ವದೇವಗಂಧರ್ವರೊಡಗೂಡಿ
ಸಡಗರದಿಂದಲಿ ವರಪದ್ಮಿನಿಯರ ಕರಪಿಡಿದು
ಒಡೆಯ ನೆಲೆಸಿಹೆ ಈ ಶೇಷಾದ್ರಿ ಮಂದಿರದಿ 5

ಬೇಡಿದಿಷ್ಟಾರ್ಥವನು ನೀಡುತ್ತ ಭಕ್ತರಿಗೆ
ನಾಡುನಾಡಿನಿಂ ಬರುವ ಬಹುಜನಂಗಳಿಗೆ
ಶಂಖ ಚಕ್ರಗದಾ ಪದ್ಮ ಶ್ರೀ ಭೂದೇವಿಯರೊಡನೆ
ಸಂಕಟ ಪರಿಹರಿಸಿ ಸಲಹುವೆ ರುಕ್ಮಿಣೀವರದಾ 6

## ರಾಗ - ಮಧ್ಯಮಾವತಿ - ತ್ರಿಪುಟ ತಾಳ

ಸೇವಕನೆಲೊನಾನು। ನಿನ್ನಯಪಾದ। ಸೇವೆ ನೀಡೆಲೊ ನೀನು ॥ಪ॥

ಸೇವಕನೆಲೊನಾನು। ನಿನ್ನಯ ಸೇವೆ ನೀಡಲೊ ನೀನು
ಕಾವದೇನೆಲೊ। ಶ್ರೀವಧೂವರ। ರಾವಣಾಂತಕರಕ್ಷಿಸೆನ್ನನು
ಗೋವರ್ಧನ ಗಿರಿ ದೇವ। ಗೋವುಗಳ ಕಾವ।
ಶ್ರೀಮಹಾನುಭಾವ। ವರಗಳನೀವದೇವ
ಶ್ರೀವಲ್ಲಭದಯಮಾಡೆನ್ನನು ಈ ವೇಳೆಗೆ ಇಂದಿರೆರಮಣ ॥ ಅ ॥

ರಾಮದಶರಥನಂದನ। ರಘುಕುಲ ಅಬ್ಧಿ-ಸೋಮ ಸುಂದರವದನ।
ವಾಮನ ಪರಿಪೂರ್ಣ। ರಾಮಕೌಸಲ್ಯಾರಾಮ ॥
ಸ್ವಾಮಿ ಶ್ರೀರಂಗಧಾಮ, ದೈತ್ಯ ವಿರಾಮ ಶ್ರೀಮದನಂತನಾಮ
ಭೀಮ ಮುನಿ ಜನಸ್ತೋಮ, ರಮ್ಯ ಗುಣಧಾಮ
ರಣರಂಗಪ್ರೇಮ। ಕೋಮಲಶ್ಯಾಮ ನೇಮ।
ಸಾಮಜವದನ ನೀನನು ದಿನ। ಕಾಮಿತ ಫಲಕರುಣಿಸಿ ಕಾಯೋ 1

ಶಂಕರ ಸುರಸೇವಿತಾ। ಶೇಷಗರುಡಾ। ಲಂಕಾರಮಣಿ ಶೋಭಿತ।
ಪಂಕಜನಯನ ಮಾ । ನಾಂಕಜನಕಪಾದ
ಪಂಕಜಾಸನವಿನಂತ ತಿರುಪತಿ। ವೆಂಕಟ ಬಿರುದಂಕಜಯ ಜಯ
ಶಂಖ ಚಕ್ರಗದೆಪುಂಖ। ಚರಿತಾಟಂಕಗೊಲಿದಪತ್ರಿಶಂಕಲಂಕಾ
ಲಂಕಾಧಿಪ ಪಾಲಿತರಘುಪತಿ, ಕಿಂಕರನಿಗೆ ಕಿಂಕರನಾನೆಲೊ 2

ಮಂದರೋದ್ಧಾರ ಮಾಧವ ಮಧುಸೂಧನ ಆ। ನಂದ ಮಂಗಳ ವಿಗ್ರಹ
ಬಿಂದು ಮಾಧವಗೋ। ವಿಂದಗೋಕುಲಾನಂದ
ವಂದಿತಾಮರವೃಂದ ಶ್ರುತಿತತಿ। ತಂದ ತುರಗವನೇರಿ ಬಂದ
ಬೃಂದಾವನದೊಳಗಿಂದ । ಯಶೋದೆಯಕಂದ। ಹರಿಗೋವಿಂದ
ಶೇಷಗಿರಿಯಲಿನಿಂದ
ಮಂದಾಕಿನಿ ಪಡೆದೆಲೊ ಧ್ರುವಗೊಲಿ। ದಂದಿ ಎನಗೊಲಿ ಹಯವದನ 3

## ರಾಗ ತೋಡಿ -ಆದಿತಾಳ

ನಿನ್ನ ನೋಡಿ ಧನ್ಯನಾದೆನೋ। ಹೇ ಶ್ರೀನಿವಾಸ।
ನಿನ್ನನೋಡಿ ಧನ್ಯನಾದೆನೋ ॥ ಪ ॥

ಪಕ್ಷಿವಾಹನ ಲಕ್ಷ್ಮೀರಮಣ। ಲಕ್ಷ್ಯವಿಟ್ಟುನೋಡೋ ಪಾಂಡು
ಪಕ್ಷ। ಸರ್ವದೈತ್ಯಶಿಕ್ಷ। ರಕ್ಷಿಸೆನ್ನ ಕಮಲಾಕ್ಷ 1

ದೇಶದೇಶ ತಿರುಗಿ ನಾನು ಆಶೆ ಬದ್ಧನಾದೆ ಸ್ವಾಮಿ
ದಾಸನು ನಾನಲ್ಲವೆ ಜಗದೀಶ ಶ್ರೀ ಶ್ರೀ ಶ್ರೀನಿವಾಸ 2

ಕಂತುಜನಕ ಕೇಳೋ ಎನ್ನ। ಅಂತರಂಗದಾಸೆಯನ್ನು
ಅಂತರವಿಲ್ಲದೆ ಪಾಲಿಸು ಶ್ರೀಕಾಂತಪುರಂದರ ವಿಠಲ 3

# ವೆಂಕಟಾದ್ರಿಯ ಮಹಿಮೆ

ಶ್ರೀನಿವಾಸನ ಕ್ಷೇತ್ರ ಎಂಥದ್ದೋ
ಮಾನಸರಿಗೋರಿಸವಲ್ಲ। ಪೊಗಳಿ ಹೇಳುವುದು ॥ ಪ ॥

ಮೇಧಾವಿಮುನಿ ತನ್ನ ತಪೋಸಿದ್ಧಿಗೆ ಸರ್ವ
ಮೇದಿನೀ ತಿರುಗಿ ಬರುತಲಿ ಎತ್ತಲೂ
ಸಾಧನಕ್ಕೆ ಸೌಮ್ಯವಾದ ಭೂಮಿಯ ನೋಡಿ, ಇವ
ಮಾಧವನ ಒಲಿಸಿದನು ಮಣಿ ಮುಕ್ತ ತೀರದಲಿ 1

ನೆಸಗಿದ ತಪಕೆ ಮೆಚ್ಚಿ ಹರಿಯೊಲಿದ ತೀವ್ರದಲಿ
ಬಿಸಜದಳ ಲೋಚನೆ ಲಕುಮಿಯಿಲ್ಲಿ
ಎಸೆವ ಮಂಜರಿ ವೃಕ್ಷದಲ್ಲಿ ವಾಸವಾಗಿ
ವಸುಧೆಯೊಳು ವಾಸವಾಗಿ ಅಗ್ರದಲಿ ಮೆರೆದನು 2

ಪರಮೇಷ್ಟಿ ಬಂದು ಕ್ಷೇತ್ರದಲ್ಲಿ ನಿಂದು । ಚ
ತುರ ಮೂರ್ತಿಗಳ ಭಜಿಸಿ, ವರ ಪಡೆದ ಧರೆಯೊಳಗೆ
ಆವನಾದರು ಬರಲು ನೀನೊಲಿದು
ಪರಮಗತಿ ಕೊಡುಯೆಂದು ಸುತ್ತಿಸಿದನು ಹರಿಯ 3

ಇಲ್ಲಿಗೆ ಬಂದು ಸತ್ಕರ್ಮವ ಮಾಡಿದಡೆ
ಎಲ್ಲ ಕ್ಷೇತ್ರದಲಿ ಮಾಡಿದ ಫಲಕಿಂತ
ಎಳ್ಳನಿತು ಮಿಗಿಲೆನಿಸಿ ಪುಣ್ಯ ತಂದುಣಿಸುವುದು
ಎಲ್ಲೆಲ್ಲಿ ಇದ್ದರು ಸ್ಮರಣೆ ಮಾಡಿರೋ ಜನರೂ 4

ಸುಗಂಧವಾಸ ಪುರುಷೋತ್ತಮ
ನಿಗ ಮಾದಿಗಳಿಗೆ ಅತಿ ದೂರನೋ
ಸುಗುಣನಿಧಿ ವಿಜಯವಿಠಲರೇಯಸರ್ವದಾ
ಗಗನದಲಿ ಪೊಳೆವನು ಬ್ರಹ್ಮಾದಿಗಳ ಸಹಿತ 5

## ರಾಗ ದೇಶಿ ( ನಾದನಾಮಕ್ರಿಯಾ ) ತ್ರಿಪುಟತಾಳ

ರಕ್ಷಿಸೋ ವೇಂಕಟಗಿರಿರಾಜಾ, ರವಿಶತತೇಜಾ, ಆಶ್ರಿತ
ಕಲ್ಪಭೂಜಾ-ಪ

ಶ್ಲೋಕ: ಶ್ರೀಮಾನ್ ಶೇಷಧರಾಧಿಪಸದಾ, ಶ್ರೀಮಾನ್ ಸಂಸಾಖ್ಯ ಪ್ರದಾ। ಶ್ರೀ ಮಾಯಾ-ಜಯಶಾಂತಿ ಕಾಂತ ಸ್ವರತಾ, ಶ್ರೀಮೂರ್ತಿ ಸಿದ್ಧೇಶ್ವರಾ,

ಶ್ರೀಮದ್ ಪದ್ಮಜ, ಪಾರ್ವತೀಶವಿನುತಾ, ಶ್ರೀಪಾದ ಪದ್ಮದ್ವಯಾ। ಸ್ವಾಮಿನ್ ದೇಹಿಸದಾ ತ್ವದೀಯ ಭಜನಂ, ಶ್ರೀಮಂತತ್ವಂ ಪಾಹಿಮಾಂ 1

ಪದ : ಹಾಟಕ ಮುಖರೀಸರಿತ ತೀರ ಕೃತಮಂದಿರ ವೈಕುಂಠ ಆಗಾರಾ। ಕೋಟಿ ಮನ್ಮಥ ಚಂದ್ರ-ಭಾಸ್ಕರ ದ್ಯುತಿ ತಿರಸ್ಕಾರ ಶ್ರೀತಮೋಹನ್ನಾಕಾರಾ॥ ಕೊಟಸ್ಥ ಅಖಿಲ ಲೋಕಕ್ಕಾಧಾರ ಸಂತತ। ಪರಾವಾರಾತ್ಮಜ ಮನೋಹರ, ಕೈಟಭ ಭವ ಮುಖ ಜಲಜಲಧರ ಚಂಡ ಸಮೀರದೀನ ಜನ-ಮಂದಾರಾ॥

ಶ್ಲೋಕ : ದೇಶ ಕಾಲ ಗುಣಾ ಅತೀತ ಅನಘಾ, ದೇವೇಂದ್ರ ಸಂಸೇವಿತಾ। ದಾಶಾರ್ಹಾ ದಶರೂಪ ಅಜಿತಾ ದಾಮೋದರಾ ಮಾಧವಾ॥ ಕಾಶೀ ಜಾಧವ ಚಿಚ್ಚಕೋರ ಉಡುಪಾ ಕಾಲೀಫಣಾ ಮರ್ದನಾ। ಶ್ರೀ ಶಾಗೀಶ-ಅಹೀಶ-ವೀಶವಿನುತಾ। ಶ್ರೀ ವಿಷ್ಣು ಸರ್ವೇಶ್ವರಾ 2

ಪದ : ವಟುವೇಷಧರಿಸಿ, ವಿಪ್ರರ ವೃಂದ ವಂಚಿಸಿನಿಂದ ಸನ್ನುತ ಮುನಿವೃಂದ, ನಟನೆ ಮಾಡುತ ಕುಂಡಲದೊಳಗಿಂದ ನಲಿಯುತ ಬಂದ ಹವಿರ್ಭೋಕ್ತಾನಂದ, ವಟದೆಲೆಯಲಿ ಮಲಗಿ ನಂದ ನಂದನ ಕಂದ ಮೂಲಕಾರಣಗೋವಿಂದ, ಕುಟಿಲ-ಕಟುಮತಿ ಖಳರ ಕೊಂದ ಧೀರವರದನೆ ಶ್ರೀ ಮುಕುಂದ (ಗೋವಿಂದ) 3

ಶ್ಲೋಕ : ರಂಗಾನಂಗಪಿತಾ ರಜಸ್ತಮ ಹರಾ ರಾಜೀವ ಫುಲ್ಲೇಕ್ಷಣಾ ಗಾಂಗೇಯಾಂಬರ ಹಾರಿ-ನೂಪುರ ಲಸತ್ ಕಾಂಚೀಲತಾ ಶೋಭಿತಾ॥

ಸಂಗೀತ ಪ್ರಿಯ, ಸಾರಸನ್ಮುನಿಜನಾ, ಸಂಗಾ ಅಸಂಗಾ ಅಜಾ, ಗಂಗಾ ತಾತ ವಿಹಂಗನಾಥ ಗಮನಾ ಶೃಂಗಾರ ಸಾರಾತ್ಮಕಾ ||

ಪದ : ಸುಖಮಯ ಮಿನ ಮಂದರಧರ, ಧರಾ ಮನೋಹರು ನರಮೃಗದಾಕಾರ। ನಖದಿಂದ ಬ್ರಹ್ಮಾಂಡ ಖರ್ಪರ, ಬೇಧಿಸಿದ ಧೀರ, ರಾಜಕುಲ ಘನಸಮೀರ। ಮುಖವಕಾಯಿದ ಮಹಾನೃಪವರ, ಗೋಪೀಜನಜಾರ, ನಾನಾಲೀಲಾವತಾರ ಮಖಜರವರದ ಮುಪ್ಪುರಹರ ನುತಮುನಿವರ ಕಲ್ಕಿದೀನ ಮಂದಾರ.

ಶ್ಲೋಕ : ನಿತ್ಯಾನಂದ ಮಹೋದಧೆ, ನಿರುಪಮ, ನಿರ್ದೋಷ ಜ್ಞಾನಾತ್ಮಕಾ, ಸತ್ಯಾವಲ್ಲಭ ಸಾತ್ವತಾಂ || ಕುಲಪತೇ, ಸಾಯುಜ್ಯ ಸಾಲೋಕ್ಯದಾ। ಸೂತ್ರಾಧಾರಕ ಹೃದ್ಗುಹಾಲಯಸದಾ, ಸಂಷುಪ್ತಿ-ಜಾಗೃತ್ ಪ್ರದಾ। ಸತ್ಯೈಶ್ವರ್ಯ ಬಲಾದಿ ಸರ್ವಭರಿತಾ, ಸರ್ವಾಪರೋಕ್ಷೇಸದಾ 4

ಪದ : ಸಟೆಯಿಲ್ಲದಲೆ ನಿನ್ನ ಪಾದವಾ, ನಂಬಿದರ ಭವಸಿಂಧುವಿನ ಪ್ರಮಾಣವ, ಕಟಿಯುಲಿ ಕರವಿಟ್ಟು ತೋರುವ, ಭಕ್ತ ಕೈರವ, ಸ್ತೋಮಸೋಮನೆನಿಸುವ, ತಟಿಕ್ಕೋಟಿ ಪ್ರಭಾವವ, ಧೀಕರಿಸುವ ಮುದ್ದು ಮುಕುಟ ಕುಂಡಲವ ಸ್ಪಟಿಕ ಹಾಟಕ ಮಣಿಕಟಕವ, ಹಾರಪದಕವ ನಿಟ್ಟು ಮೆರೆವ ಶ್ರೀದೇವ.

ಶ್ಲೋಕ : ಲಕ್ಷ್ಮೀವಕ್ಷ ಸುಕುಂಕುಮಾಂಕಿತಪದಾ, ಲಕ್ಷ್ಮೀ ವಿಲಾಸಾಸ್ಪದಾ, ಲಕ್ಷ್ಮೀ ಬಾಹುಲತಾಶ್ರಯಾ, ಭುಜಯುಗಾ, ಲಕ್ಷ್ಮೀಸದಾಲಿಂಗಿತಾ, ಲಕ್ಷ್ಮೀ ಅಕ್ಷಿಸುಪದ್ಮ ಪದ್ಮಿನೀಪ್ರಿಯಾ, ಲಕ್ಷ್ಮೀ ಮನೋನಾಯಕಾ, ಲಕ್ಷ್ಮೀ ಚಿತ್ತ ಚಕೋರ ಪೂರ್ಣ ಉಡುಪಾ, ಲಕ್ಷ್ಮೀಶತ್ವಂ ಪಾಹಿಮಾಮ್

ಪದ : ವರಚಕ್ರಾಭಯಗದಾ - ಧರಧರ ಚತುಷ್ಟಯಕರ, ಉರಪೀನ ವಿಸ್ತಾರಾ, ಸರಿಗೆ-ಪದಕ ಒಪ್ಪೋಕಂಧರ, ಕರಸಿಂಧೂರ, ಕರಪೋಲ್ವಕೇಯೂರ, ಬೆರಳಲ್ಲಿ ಮಾಣಿಕ್ಯ ದುಂಗುರ, ತೋಳಬಂಧುರ,

ಶಾಲಗ್ರಾಮದ ಹಾರ, ಸಿರಿವತ್ಸಾಂಗ ನಾಭಿಗಂಭೀರ, ಜಗದೋದ್ಧಾರ, ಸರ್ವಭುವನಾಧಾರ 5

ಶ್ಲೋಕ : ಮಂದಹಾಸ ಮುಖೇಂದು ಸಂದರುಶನಾ, ದಿಂದಾಘ ಬೆಂದೋಹುದೋ, ಒಂದೇ ವಂದನ ಮಾಡಲಾಕ್ಷಣ ಸುಖಾ ಸಂದೋಹ ತಂದಿಪ್ಪುದೋ, ನಿಂದೂ ಅರ್ಚಿಸಿತ್ತೋತ್ರ ಮಾಳ್ಪರ ಮಹಾನಂದಾವನು ಬಲ್ಲನೋ। ತಂದೇ ನಿನ್ನಯ ಸುಂದರಾಂಘ್ರಿ ಸತತಾ ಪೊಂದಿಪ್ಪುದೇ ಪಾಲಿಸೋ 6

ಪದ : ಮಾಡಲರಿಯೆ ಸುಸಾಧನವನು, ದುಷ್ಟ ಚಿತ್ತನು, ಪಾಪಕರ್ಮನಿರತನು, ಬೇಡುವೆ ಬಹುವಿಧ ಸುಖವನು, ಆಶಾಬದ್ಧನು, ಇದಕೆ ಗತಿಯೇನು। ಬೇಡಿದುದೆಲ್ಲವ ಕೊಡುವಿನೀನು, ಎಂದು ಬಂದೆನು. ಆಶ್ರೀತ ಸುರಧೇನು, ಬೇಡದಂತಲೆ ಮಾಡನ್ಯರ ನಾನು, ಇದೇವರನು ನೀಡಬಹುದೈಯನೀನು ॥

ಶ್ಲೋಕ : ನಾನಾ ಜನುಮದಿಕಾಯವಾಚಮನಸಾ, ಎನ್ನಿಂದಲೇ ಮಾಳ್ಪುದ, ಜ್ಞಾನಾಜ್ಞಾನ ದೊಳಪ್ಪನಂತ ಕ್ರಿಯೆಯಂ ನಿನ್ನಿಂದ ಪ್ರೀತ್ಯಾಗಲಿ, ನಾನಾದ್ರವ್ಯದಿ ಕಾರ್ಯರೂಪ ಗುಣದೀ ಸರ್ವತ್ರಬಿಂಬಕ್ರಿಯಾ, ಜ್ಞಾನಾಮಾತುರವಿತ್ತು ನೀನೇ ಪೊರೆಯೋ ಪ್ರಾಣೇಶನಾರಾಯಣ 7

ಪದ : ವಿಶ್ವ-ತೈಜಸ-ಪ್ರಾಜ್ಞ-ತುರ್ಯಾತ್ಮಾ, ಅಂತರಾತ್ಮಾ ಪರಮಾತ್ಮಾ, ಜ್ಞಾನಾತ್ಮಾ, ವಿಶ್ವನಾಟಕ ಯಗ್ ಯಜುಸ್ಸಾಮಾ, ದ್ಯಾಗಮ ಸ್ತೋಮ ಪ್ರತಿಪಾದ್ಯ ತ್ರಿಧಾಮಾ, ವಿಶ್ವತೋಮುಖ ಗುಣಗಣ ಭೂಮ ಸಂತತ ಸಾಮ ವಂದ್ಯನೆ ಸಾರ್ವಭೌಮ, ವಿಶ್ವಾಸದಿಂದಲಿ ತವನಾಮಾ, ಭಜನೆಯ ಕಾಮಾ। ಎನಗೀಯೊ ಶ್ರೀರಾಮಾ.

ಶ್ಲೋಕ : ಅನ್ಯಾವಾರ್ತೆಗೆ ಪೋಗಲೀಸದೆ ಮನಾ। ನಿನ್ನಂಘ್ರಿಯೊಳ ನಿಲ್ಲಿಸೋ। ನಿನ್ನಾವಾರ್ತೆಯ ಕೇಳಿ ಸ್ವೈ ಅನುದಿನಾ। ನಿನ್ನಾರ್ಚನೆ ಮಾಡಿಸೋ ॥

ನಿನ್ನಾ ಮೂರ್ತಿಯ ತೋರಿಸೈ ಮನದೊಳ್, ನಿನ್ನನ್ನೇ ಕೊಂಡಾಡಿಸೋ,
ನಿನ್ನಂತಾಗಲಿ ಸರ್ವ ಇಂದ್ರಿಯಗಳೂ, ನಿನ್ನಾಳ್ಗಳೋಳಡಿಸೋ 8

ಪದ : ಭಜಕ ಜನರಿಗೆ ಭಾಗ್ಯೋದಯಾ ಭಾಗವತಧ್ಯೇಯಾ ಸುಭಗುಣಗಣನಿಲಯ। ವಿಜಯ ಸಾರಥಿ ವೀತಾಖಿಲ ಹೇಯಾ, ವಿನಿರ್ಜಿತ ಮಾಯಾ, ವಿಪ್ರ-ಗೋ-ಸುರಪ್ರೀಯಾ ತ್ರಿಜಗಾಧೀಶನೆ ಅಪ್ರಾಕೃತಕಾಯಾ, ಕವಿಜನಗೇಯಾ, ವೆಂಕಟಗಿರಿ ನಿಲಯ। ನಿಜ ಗುರುಗೋಪಾಲ ವಿಠಲಯ್ಯ, ನಮೋನಮೋ ಜೀಯಬೇಗ ಪಿಡಿ ಎನ್ನಕೈಯ 9

ರಾಗ-ಬಲಹರಿ-ಆದಿತಾಳ

ಪಾಲಿಸಯ್ಯಾ। ಪವನನಯ್ಯಾ
ಪಾಲವಾರಿಧಿಶಯ್ಯಾ, ವೇಂಕಟರೇಯಾ ।ಪ।
ಕಾಲಕಾಲಕೆ ಹೃದಯಾಲಯದೊಳು ನಿನ್ನ
ಶೀಲ ಮೂರುತಿ ತೋರೋ ಮೇಲು ಕರುಣದಿ ॥ಅ.ಪ.॥

ಶ್ರೀ ಶಾಸಂಸಾರವೆಂಬೊ ಸೂಸುವಶರಧಿಯೋಳ್
ಈಸಲಾರೆನೊ ಹರಿಯೇ। ವಧೂರಿಯೇ
ದಾಸನೆಂತೆಂದ ಮ್ಯಾಲೆ ಘಾಸಿಗೊಳಿಸುವುದು
ಲೇಸು ನಿನಗಲ್ಲವಯ್ಯಾ, ಹೇಜೀಯಾ,
ದೋಷರಾಶಿಗಳೆಲ್ಲ ನಾಶನ ಮಾಡಿವಿ
ಶೇಷಜ್ಞಾನ ಭಕ್ತಿ ವೈರಾಗ್ಯವನಿತ್ತು
ಆಸೆಯ ತ್ಯಜಿಸಿನ್ನು ಮಿಾಸಲಮನ ಮಾಡಿ
ನೀ ಸಲಹೋದು ಶ್ರೀನಿವಾಸ ಕೃಪಾಳೋ 1

ಮೂರುಗುಣಗಳಿಂದ ಮೂರು ತಾಪಗಳಿಂದ
ಮೂರು ಅವಸ್ಥೆಯಿಂದ ಮುಕುಂದಾ
ಮೂರು ಐದರಿಂದ ಮೂರು ಏಳರಿಂದ
ಮೂರಾರದಾರಿಗಾಣದೆ ಮೂರಾದೇ
ಮೂರು ಹಿಡಿಸಿಮ್ಯಾಲ್ ಮೂರೆರಡರ ಜೋಡಿಸಿ
ಮೂರು ಮೂರುಭಕ್ತಿ ಮೂರುಕಾಲಕೆಯಿತ್ತು
ಮೂರು ರೂಪನಾಗಿ ಮೂರುಲೋಕವನೆಲ್ಲ
ಮಾರು ಮಾಡಿದ ಬಿಂಬರೂಪಿವಿಶ್ವ 2

ಕರುಣಾಸಾಗರ ನಿನ್ನ ಸ್ಮರಣೆಮಾತ್ರದಿಸರ್ವ
ದುರಿತ ಪರಿಹಾರವೆಂದುನಾ ಬಂದು

ಮೊರೆ ಹೊಕ್ಕ ಮ್ಯಾಲಿನ್ನು ಪೊರೆಯಬೇಕಲ್ಲದೆ
ಜರಿದು ನೀದೂರ ನೋಡುವರೇ ಮುರಾರೇ
ಮರುತಾಂತರ್ಗತ ಗೋಪಾಲವಿಠಲ
ಶರೀರ ನಿನ್ನ ಚರಣಕರ್ಪಿಸುವೆನು।
ಸರಿಬಂದದ್ದು ಮಾಡೋ ಬಿರುದು ನಿನ್ನದು ದೇವಾ
ಪರಮದಯಾನಿಧೆ ಉರುಗಾದ್ರಿವಾಸಾ 3

## ರಾಗ-ಆರಭಿ ಆದಿತಾಳ

ಶ್ರೀನಿಕೇತನ, ಪಾಲಯಮಾಂ, ಶ್ರೀನಿಕೇತನ ||ಪ||

ಜ್ಞಾನಗಮ್ಯಕರುಣಾನಿಧಿನಿನ್ನಡಿ
ಗಾನಮಿಸುವೆಪೊರೆ ದೀನದಯಾಳೆ ||ಅ.ಪ||

ಜ್ಞಾನ ಮಾನದ ಶರಣರಸುರಧೇನು ಸರ್ವದ
ನೀನೆಂದರಿತು ಸದಾನುರಾಗದಲಿ
ಧ್ಯಾನಿಪೆ ಮನದನು ಮಾನವಕಳೆಯೋ 1

ಶ್ರೀಕರಾರ್ಚಿತ ಪಾದಾಬ್ಜಪ। ರಾಕು ಅಚ್ಯುತ
ಶೋಕನಾಶನ ವಿಶೋಕ ಜನಕ। ಹೃದ್
ವ್ಯಾಕುಲ ಕಳೆಯೋ। ಕೃಪಾಕರ ಒಲಿದು 2

ಪನ್ನಗಾಚಲ ನಿವಾಸ ಪ್ರಪನ್ನ ವತ್ಸಲ।
ಬಿನ್ನಪ ಕೇಳೋ ಜಗನ್ನಾಥವಿಠಲ
ಧನ್ಯನ ಮಾಡೊ ಶರಣ್ಯ ಶರಣನ 3

## ರಾಗ-ಮಧ್ಯಮಾವತಿ-ಏಕತಾಳ

ವೆಂಕಟಾದ್ರಿನಿಲಯನ, ಪಂಕಜನಾಭನ । ತೋಕವ್ವಲಕುಮಿ ॥ಪ॥
ವಸುದೇವ, ದೇವಕಿ ಕಂದಾ ನಮ್ಮ ಶಶಿಮುಖಿಯರೊಡನೆ
ಆನಂದಾ, ಪಶುಗಳ ಕಾಯ್ದುಗೋವಿಂದಾ, ನಮ್ಮ ಬಿಸಜನಾಭ
ಮುಕುಂದನ ತೋರವ್ವಾ 1

ಸಾಮರಾಜಿನ ವರದಾ ಬಲು। ಪ್ರೇಮದಿ ಭಕ್ತರ ಪೊರೆದಾ
ಆಮಹಾದಿತಿಜರ ತರಿದಾ ನಿಸ್ಸೀಮ ಮಹಿಮನಾಗಿ ಮೆರೆದಾ-ನಮ್ಮ
ವೆಂಕಟಾದ್ರಿ ನಿಲಯನ ತೋರಮ್ಮಾ 2

ಉರಗಾಗಿರಯಲ್ಲಿಪ್ಪ ನಮ್ಮ ಮರುತನ ಹೆಗಲೇರಿ ಬಪ್ಪ। ಶರಣರಿ
ಗೊಂರವಿತ್ತು ತಪ್ಪ ಸಿರಮೋಹನ್ನವಿಠಲ ತಿಮ್ಮಪ್ಪ। ನಮ್ಮ ವೆಂಕಟಾದ್ರಿ
ನಿಲಯನ ತೋರಮ್ಮಾ 3

# ಸ್ತುತಿರತ್ನಮಾಲಾ

ಭಾನುಕೋಟಿತೇಜ, ಲಾವಣ್ಯ ಮೂರುತಿ, ಶ್ರೀವೆಂಕಟೇಶನೆ
ನಮೋ ನಮೋ, ಶ್ರೀನಿವಾಸದಯಾ ನಿಧೆ 1

ಶೇಷಾಚಲ ನಿವಾಸ, ದೋಷದೂರನೆ, ಭಕ್ತ ಪೋಷಕ,
ಶ್ರೀಕಾಂತ ನಮೋ ನಮೋ ಶ್ರೀನಿವಾಸದಯಾನಿಧೆ 2

ನೀಲ ಮೇಘಶ್ಯಾಮ, ಪಾಲಸಾಗರ ಶಯನ, ಶ್ರೀಲಕುಮೀಶನೆ
ನಮೆ ನಮೋ ಶ್ರೀನಿವಾಸ ದಯಾವಿಧೆ 3

ಖಗರಾಜವಾಹನ, ಜಗದೊಡೆಯನೆ, ನಿನ್ನ ಅಗಣಿತ ಮಹಿಮೆಗೆ
ನಮೋ ನಮೋ ಶ್ರೀನಿವಾಸದಯಾನಿಧೆ 4

ಶಂಖಚಕ್ರಧರ, ವೆಂಕಟರಮಣಾಕಳಂಕ ಮೂರುತಿ ದೇವ
ನಮೋ ನಮೋ ಶ್ರೀನಿವಾಸದಯಾ ನಿಧೆ 5

ಪನ್ನಂಗಶಯನನೆ, ನಿನ್ನಂಥ ದೇವರು, ಇನ್ನುಂಟೆ
ಅಜಭವಸುರವಂದ್ಯಾ, ಶ್ರೀನಿವಾಸದಯಾನಿಧೆ 6

ಸೃಷ್ಟಿ ಇಲ್ಲದೆಲೆ, ಒತ್ತಟ್ಟಿಗಿದ್ದವರನ್ನು ಸೃಷ್ಟಿಸಿ ಜೀವರ
ಸಲಹುವಿ ಶ್ರೀನಿವಾಸದಯಾನಿಧೆ 7

ತನುಮನ ಕರಣಗಳನು ಕೊಟ್ಟು ಅನಿಮಿಷರನು ಅಭಿಮಾನಿ
ಗಳೆನಿಸಿದಿ। ಶ್ರೀನಿವಾಸದಯಾನಿಧೆ 8

ದೀನವತ್ಸಲ, ನಿನ್ನಾಧೀನದೊಳಗಿಟ್ಟುಜ್ಞಾನ ಕರ್ಮಗಳ
ಮಾಡಿಸುವಿಯೊ ಶ್ರೀನಿವಾಸದಯಾನಿಧೆ 9

ಕ್ಷಣಬಿಡದಲೆ ಭಕ್ತ ಜನರ ರಕ್ಷಿಸುವಿ, ದುರ್ಜನರಿಗೆ
ದುರ್ಲಭನೆನಿಸುವಿ, ಶ್ರೀನಿವಾಸದಯಾನಿಧೆ 10

ವೈಷಮ್ಯ ನೈರ್ಘೃಣ್ಯಲೇಶವಿಲ್ಲವರ ಉಪಾಸನ
ದಂತೆ ಫಲಗಳನೀವಿ ಶ್ರೀನಿವಾಸದಯಾನಿಧೆ 11

ಒಂದೇ ರೂಪದಿ ಬಹುಮಂದಿಯೊಳಗಿದ್ದು, ಬಂಧ ಮೋಕ್ಷ
ಪ್ರದನೆನಿಸುವಿ, ಶ್ರೀನಿವಾಸದಯಾನಿಧೆ 12

ಜ್ಞಾನಿಗಳರಸ, ಅಜ್ಞಾನಿಗಳೊಳು, ನಾ ಅಜ್ಞಾನಿ
ಸುಜ್ಞಾನವಪಾಲಿಸೋ ಶ್ರೀನಿವಾಸದಯಾನಿಧೆ 13

ನಂಬಿದೆನಾನಿನ್ನ, ಬಿಂಬ ಮೂರುತಿ ಎನ್ನಡಿಂಭದೊಳಗೆಪೊಳಿ
ಅನು ದಿನ, ಶ್ರೀನಿವಾಸದಯಾ ನಿಧೆ 14

ನಿನ್ನ ಹೊರತು ಎನಗನ್ಯರಿಂದೇನಯ್ಯ, ನಿನ್ನ ಸ್ತುತ್ತಿಪಸುಖಕ್ಕೆಣೆ
ಗಾಣೆ, ಶ್ರೀನಿವಾಸದಯಾನಿಧೆ 15

ಘನ್ನ ಮಹಿಮ ಎನಗಿನ್ನೊಂದು ಬಯಕಿಲ್ಲ! ನಿನ್ನ ಧ್ಯಾನದೊಳಿಡು
ಮರೆಯದೆ ಶ್ರೀನಿವಾಸನದಯಾನಿಧೆ 16

ದುರ್ಜನ ಸಂಗ ವಿವರ್ಜಮಾಡಿಸಿ, ಸಾಧುಸಜ್ಜನರ ಸೇವೆ
ಯೊಳಗಿಡೋ ಶ್ರೀನಿವಾಸದಯಾನಿಧೆ 17

ವಿಸುಜನ್ಮಗಳೀಯೋ ಲೇಸುಚಿಂತೆಯು ಇಲ್ಲ ದಾಸನೆಂದೆನಿಸು
ದಾಸ್ಯವನಿತ್ತು, ಶ್ರೀನಿವಾಸದಯಾ ನಿಧೆ 18

ಎನ್ನಪ್ಪ ಎನ್ನಣ್ಣ ಎನ್ನ ಕಾಯ್ವದೇವ, ನಿನ್ನ ವಿಸ್ಮರಣೆಯ
ಕೊಡದಿರೊ ಶ್ರೀನಿವಾಸದಯಾ ನಿಧೆ 19

ಮನಸಿನ ಚಂಚಲವನು ತೊಲಗಿಸಿ, ಪಾದವನಜದಲ್ಲಿರಿಸಯ್ಯಾ
ಜಿತವಾಗಿ, ಶ್ರೀನಿವಾಸದಯಾನಿಧೆ 20

ಕರಣಗಳಿಂದ ಆಚರಿಸುವ ವಿಷಯ, ಶ್ರೀಹರಿ ನಿನ್ನ ಸೇವೆಯಾ
ಗಲಿ! ಶ್ರೀನಿವಾಸದಯಾನಿಧೆ 21

ಹರಿಯೇ ಸರ್ವೋತ್ತಮ। ಸುರರೆಲ್ಲದಾಸರು। ತಾರತಮ್ಯ
ಭೇದ ಜ್ಞಾನವನೀಯೋ ಶ್ರೀನಿವಾಸದಯಾ ನಿಧೆ 22

ಬುದ್ಧಿಪೂರ್ವಕ ಗುರು ಮಧ್ವಮತವ, ತಿಳಿದಿದ್ದವನೆ ಜ್ಞಾನ
ವೃದ್ಧನೋ ಶ್ರೀನಿವಾಸ ದಯಾ ನಿಧೆ 23

ಗುರುಗಳ ಕರುಣಸುಸ್ಥಿರವಾಗಿದ್ದವರಿಗೆ, ಹರಿನಿನ್ನನುಗ್ರಹ
ವಾಗುವುದೋ ಶ್ರೀನಿವಾಸದಯಾನಿಧೆ 24

ನಿನ್ನವರಲ್ಲದೆ ಅನ್ಯರು ಬಲ್ಲರೆ ಘನ್ನ ಮತದ ಸುಖಸವಿಯನ್ನು
ಶ್ರೀನಿವಾಸದಯಾ ನಿಧೆ 25

ನಿನ್ನ ಚಿತ್ತಕೆ ಬಂದುದೆನ್ನ ಚಿತ್ತಕೆ ಬರಲಿ ಅನ್ಯಥ ಬಯಕೊಡದಿರೊ ।
ಶ್ರೀನಿವಾಸದಯಾನಿಧೆ 26

ಸ್ತುರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ, ಪ್ರತಿದಿನಸುಖ
ಅಭಿವೃದ್ಧಿಯೋ ಶ್ರೀನಿವಾಸದಯಾ ನಿಧೆ 27

ಗುರುಗಳು ಮಧ್ವರಾಯರು, ಮೂರುಲೋಕಕ್ಕೆ ದೊರೆ
ಗುರು ಶ್ರೀ ಶವಿಠಲ ನಮೋ ಶ್ರೀನಿವಾಸದಯಾ ನಿಧೆ 28

## ರಾಗ-ನಾದನಾಮ ಕ್ರಿಯಾ ( ದೇಶಿ ) ಏಕಾತಳ

ಬಿಡೆನೊ ನಿನ್ನಂಘ್ರಿಶ್ರೀನಿವಾಸಾ। ಎನ್ನ ದುಡಿಸಿಕೊಳ್ಳೆಲೊ ಶ್ರೀನಿವಾಸಾ।
ನಿನ್ನುಡಿಯ ಜೀತಲ್ಲೋ ಶ್ರೀನಿವಾಸಾ। ನನ್ನ ನಡೆತಪ್ಪಕಾಯೋ ಶ್ರೀನಿವಾಸಾ
॥ ಪ ॥

ಬಡಿಯೊ ಬೆನ್ನಲಿ ಶ್ರೀನಿವಾಸಾ ಎನ್ನೊಡಲ ಹೊಯ್ಯದಿರು
ಶ್ರೀನಿವಾಸಾ। ನಾ ಬಡವ ಕಾಣೆಲೋ ಶ್ರೀನಿವಾಸಾ ನೀ
ನ್ನೊಡಲ ಹೊಕ್ಕನೊ ಶ್ರೀನಿವಾಸ - 1

ಪಂಜುಹಿಡಿವೆನೊ ಶ್ರೀನಿವಾಸಾ, ನೀನ್ನೆಂಜಲ ಬಳಿಯುವೆ ಶ್ರೀನಿವಾಸಾ, ಸಂಜೆ
ಉದಯಕೆ ಶ್ರೀನಿವಾಸಾ ಕಾಳಂಜಿಯ ಪಿಡಿವೆನೊ ಶ್ರೀನಿವಾಸಾ 2

ಸತ್ತಿಗೆ ಚಾಮರ ಶ್ರೀನಿವಾಸಾ ನಾ ನೆತ್ತಿಕುಣಿವೆನೊ ಶ್ರೀನಿವಾಸಾ
ನಿನ್ನ ರತ್ನದ ಹಾವಿಗೆ ಶ್ರೀನಿವಾಸಾ। ಹೊತ್ತು ನಲಿವೆನೋ ಶ್ರೀನಿವಾಸಾ 3

ಹೇಳಿದಂತಾಲಿಪೆ ಶ್ರೀನಿವಾಸಾ। ನಿ ನ್ನಾಳಿಗಾಳಾಹೆ ಶ್ರೀನಿವಾಸಾ,
ಅವರೂಳಿಗವ ಮೊಳ್ಪೆ ಶ್ರೀನಿವಾಸಾ। ನನ್ನ ಪಾಲಿಸೊ ಬಿಡದೆ ಶ್ರೀನಿವಾಸ 4

ನಿನ್ನ ನಾಮ ಹೋಳಿಗೆ ಶ್ರೀನಿವಾಸ, ಕಳ್ಳ ಕುನ್ನಿನಾನಾಗಿಹೆ
ಶ್ರೀನಿವಾಸಾ। ಕಟ್ಟಿ ನಿನ್ನವರೊದ್ದರೆ ಶ್ರೀನಿವಾಸಾ। ಎನಗಿನ್ನು ಲಜ್ಜೇತಕೆ
ಶ್ರೀನಿವಾಸಾ 5

ಬೀಸಿಕೊಲ್ಲಲವರೆ ಶ್ರೀನಿವಾಸಾ। ಮುದ್ರೆ ಕಾಸಿಚುಚ್ಚಲವರೆ
ಶ್ರೀನಿವಾಸಾ। ಮಿಕ್ಕ ಗಾಸೆಗಂಜೆನಯ್ಯ ಶ್ರೀನಿವಾಸಾ, ಎಂಜಲಾಸೆಯ ಬಂಟನಾ
ಶ್ರೀನಿವಾಸ 6

ಹೇಸಿನಾನಾದರೆ ಶ್ರೀನಿವಾಸಾ, ಹರಿ। ದಾಸರೋಳುಪೊಕ್ಕೆ ಶ್ರೀನಿವಾಸಾ
ಅವರ ಭಾಷೆಯ ಕೇಳಿಹೇ ಶ್ರೀನಿವಾಸಾ, ಆ ವಾಸೆಯ ಸ್ಯೆರಿಸೊ ಶ್ರೀನಿವಾಸಾ
7

ತಿಂಗಳವನಲ್ಲ ಶ್ರೀನಿವಾಸಾ। ವತ್ಸರಂಗಳವನಲ್ಲ ಶ್ರೀನಿವಾಸಾ। ರಾ
ಜ್ಯಂಗಳ ಸವಡಿಪೆ ಶ್ರೀನಿವಾಸಾ, ಭವಂಗಳ ದಾಟುವೆ ಶ್ರೀನಿವಾಸಾ 8

ನಿನ್ನವ ನಿನ್ನವ ಶ್ರೀನಿವಾಸಾ, ನಾ ನನ್ಯವನರಿಯೆನೊ ಶ್ರೀನಿವಾಸಾ।
ಅಯ್ಯ, ಮನ್ನಿಸೊ ತಾಯ್ತಂದೆ ಶ್ರೀನಿವಾಸಾ, ಪ್ರ ಸನ್ನವೆಂಕಟಾದ್ರಿ ಶ್ರೀನಿವಾಸಾ

ಎಲೆಲೋ ಶ್ರೀನಿವಾಸ। ಗೋವಿಂದಾ ಎಲೆಲೋ ವೆಂಕಟೇಶಾ ತಿರುಪತಿಯಲ್ಲಿರುವ್ರೋ ಸ್ವಾಮಿ ವೈಕುಂಠವಾಸನೆ ಕರುಣಾ ಸಾಗರ ಹರಿಯೇ ವರವಕೊಡುವ ಧೊರಿಯೇ ಆಕಾಶರಾಜನಾ ಅಳಿಯ ಎಂಬುವನೇ ಆಕಾಶರಾಜನ ಮಗಳು ಪದ್ಮಾವತಿಯ ಸೊಡ್ಡವನೇ। ಬಕುಳೇನ ಕಳುಹಿಸಿ ಅವಳ ಪದ್ಮಾವತಿಯ ಕೊಡ್ಡವನೇ ಶಂಖಚಕ್ರಧಾರನೇ ವೆಂಕಟೇಶನೇ, ಪೀತಾಂಬ್ರಧಾರನೇ ಪ್ರೀತಿಉಳ್ಳವನೇ ರತ್ನ ಖಚಿತ ಆಭರಣ ಭೂಷಿತನೇ ಧ್ವಜ ವಜ್ರಾಂಕಿತರೇಖಿಉಳ್ಳವನೇ ಮೂರ್ಜಗ ದೊಡೆಯನೇ, ಮುದ್ದು ವೆಂಕಟೇಶನೇ, ಅಪಾರ ಮಹಿಮನೇ ಅಪ್ರಮೇಯನೆ, ವಕ್ಷದಲಿ ಲಕ್ಷ್ಮಿಯ ಇಟ್ಟುಕೊಂಡವನೆ, ವದನದಲ್ಲಿ ತಾಯಿಗೆ, ಜಗವತೋರ್ದವನೆ, ಹದಿನಾಲ್ಕು ಲೋಕವನು ಉದರದೊಳಗಿಟ್ಟವನೆ, ಕುಂಟಗೆ ಕಾಲನು ಕೊಟ್ಟವನಿವನೆ, ಕುರುಡಗೆ ಕಂಗಳು ಇತ್ತವನಿವನೆ, ಗಂಟುಕೊಟ್ಟ ಶ್ರೀನಿವಾಸನು ಇವನೇ, ದಾಸರಿಗೆ ಇಷ್ಟವ ನಡೆಸಿಕೊಟ್ಟವನೆ ಗೋಸಾಯಿಮಠದ ಮುಂದೆ ಗೋವಿಂದ ಬಂದು ಆಗೊಬ್ಬನ ಮೇಲೆ ಆವೇಶವು ಬಂದು ಹರಕೆ ಸಲ್ಲಿಸಿದ ಮೇಲು ಕೂಸನ್ನು ತಂದು ರಥದ ಗಾಲಿಗೆ ಹಾಕಿಗಡಗಡನೆ ರಥವೇರಿ ಹೊರಟ ಶ್ರೀವೇಂಕಟಚಾಲನೂ 1

ಭಾಸುರ ಗುಣನಿಧಿಯೇ ಬೇಸರದೆ ಭಾಗ್ಯವ ಕೊಡುವ ದೊರೆಯೇ। ಕೇಶವನ ನೆನೆದಾರೇ ಕ್ಲೇಶವೆಂಬುದೇ ಇಲ್ಲ ಮಾಧವನ ನೆನೆದಾರೇ, ಬೇಡಿದ ಭಾಗ್ಯವ ಕೊಡುವ ದೊರೆ, ಕೊಲ್ಲಾಪುರಿ ಲಕ್ಷ್ಮಿಯ ಪಟ್ಟದರಸನ ನೆನೆಯಬೇಕು ಎಲ್ಲ ಕಾಶಿಕರ್ಣಾಟಕ ದೇಶದ ಜನರು ಕಾಸು ವೀಸೆಗಳ ತಂದು ಹುಂಡಿ ತುಂಬಿದಾರಂದು, ಕಡಪ-ಕರ್ನೂಲು ಕಾಗಿನೆಲ್ಲಿ ಜನರು ಹಿಡಿಕಾಣಿಕೆ ತಂದು ಬೇಗ ಕೊಡುವ್ರೋರು, ನೆಲ್ಲೂರು ಗುಂಟೂರು, ಸೋಸಲೇಜನರು, ಲೆಕ್ಕವಿಲ್ಲದೆರೊಕ್ಕಗಳನು ತಂದು ಸುರಿವ್ರೋರು. ಉಡುಪಿ ಸುಬ್ರಹ್ಮಣ್ಯದ ಜನರೂ ರೊಕ್ಕಗಳ ತಂದು ಸುರುವ್ರೋರು, ಬಂಡಿಬಂಡಿಯಲ್ಲಿ ರೊಕ್ಕಗಳ ತಂದು ಶ್ರೀನಿವಾಸನ ಹುಂಡಿ ತುಂಬಿದಾರಂದು, ಪರಮ ಸಂತೋಷದಲಿ ಪರಿಸೆಜನ ಬಂದು, ಅಚ್ಯುತನಿಗೆ ಅರ್ಪಿಸಲು ಆಗಲೆಂತೆಂದು ಪ್ರತ್ಯೇಕ ಪ್ರತ್ಯೇಕ ಹರಕೆ ಇದ್ದವರು, ಬಾಯಿ ಬೀಗದ ವರಸೆ ಬಂದು ನಿಲ್ಲೋರು, ಬಾಸಿಂಗವನೆ ಕಟ್ಟಿ ಬೆಟ್ಟ ಹತ್ತೋರು। ಬಾಸಿಂಗ ನರಸಿಂಹ ಗುಡಿಯಲ್ಲಿ ಇಡುವ್ರೋರು, ದಂಪತಿ ದಂಪತಿ ಜೋಡಾಗಿ ಬಂದು ಬಿಡುವ್ರೋರು ಸೆರಗುಗಳ ಗಂಟು ಹಾಕಿ ಕೊಂಬೋರು, ತಿರುಗಿ ಉಲ್ಲಾಸದಿ ಬೆಟ್ಟ ಹತ್ತೋರು, ಏಳುವಾರದ ತೊಡಿಗೆ ಆಭರಣ ತಂದು ಸುಲಿಗೆ ಕೊಟ್ಟರು ಬೇಗ ಸಂತೋಷದಿಂದ, ಕೂಸಿನ್ನ ವರಗಳನು ಬೇರೋರು ಅಲ್ಲಿ, ಪ್ರಾಣಾಚಾರಗಳು ಮಲಗಿದರಲ್ಲಿ ಚಿತ್ತದಲಿ ವೇಕಂಟಾಚಲನು ತಾ ಬಂದು। ತಾಂಬೂಲ ಫಲ ತಂದುಕೊಟ್ಟನು ಆಗ, ಸ್ವಪ್ನದಿಂದೆಚ್ಚರಿಸಿ ಕೇಳಿದರಾಗ ಸ್ವಪ್ನದಿಂದೆಚ್ಚರಿಸಿ ಸಖಿಯರು ಕೇಳಿ ತಿಳಿದು, ಸುಜ್ಞಾನಿಗಳನು ಹುಡುಕಿದರಲ್ಲಿ ವೇಂಕಟ ಕೊಟ್ಟನು ಫಲವೆಂದರಾಗ, ಆನಂದ ಭರಿತರಾದರು ಅವರುಗಳು ಆಗ. ಗರ್ಭಗುಡಿಯಲ್ಲಿ ನುಗ್ಗೋರುಬೇಗ, ಶ್ರೀನಿವಾಸ ಧಣಿಯ ನೋಡಿದರಾಗ, ಕೃಷ್ಣಾಜಿನದ ಪೆಟ್ಟು ತಿಂಬೋರು ಅಲ್ಲಿ, ಅರಟ್ಟು ಗಾಳಿಗಳ ಬೀಸೋರು ಅಲ್ಲಿ, ಹುಗ್ಗಿ ದೋಸೆಗಳನ್ನು ತಿಂಬೋರು ಅಲ್ಲಿ, ತೊಟ್ಟಿ ತೀರ್ಥಗಳನ್ನು ಕೊಂಬೋರು ಅಲ್ಲಿ, ಗರುಡಗಂಭದ ಬಳಿಗೆ ಬಂದು ನಿಲ್ಲೋರು, ಭಕ್ತವತ್ಸಲಾ ನೀವೆ ನಮಗೆ ಗತಿಯೆಂಬೋರು ಭಾವ ಶುದ್ಧಿಯಿಂದ ಬೇಡಿಕೊಂಬೋರು, ದುರ್ಜನರ

ಸಂಗವನು ದೂರ ನೂಕಬೇಕೆನುತ, ಸಜ್ಜನರ ಸಂಗವನು ಕೊಡಿಸಬೇಕೆನುತ ತಪ್ಪು ತಪ್ಪು ಎಂದು ತಮ್ಮ ದವಡೆಗಳ ತಟ್ಟುತ್ತ ಗೋವಿಂದ ಗೋವಿಂದ ಗೋವಿಂದ ಎಂದು ಕುಣಿಯುತ್ತ, ಚೆನ್ನವಾಗಿಳಿಯುತಾ ll ಎಲೆಲೋ ಶ್ರೀನಿವಾಸ 2

ಗಿರಗೌರಾದಲ್ಲಿ ಮೆರೆಯುತಲಿರುವ ಸ್ವಾಮಿ ಕಲಿಯುಗ ವೈಕುಂಠಾನು। ಕಲ್ಯಾಣಂ ಶೇಷಗಿರಿ, ಕಾಮಿತಾರ್ಥವನು ಬೇಗ ಕೊಡಿಸ್ಯೆಯ್ಯಾ। ಹತ್ತಾವತಾರನಾಗಿ ಎತ್ತಿ ತೋರ್ದವನೆ, ಕೂರ್ಮಾವತಾರನಾಗಿ ಭಾರಪೊತ್ತವನೆ, ವರಹಾವತಾರನಾಗಿ ಜಗದಲ್ಲಿ ಮೆರೆದವನೆ। ಉಕ್ಕು ಕಂಭ ಒಡೆದು ಉಗ್ರತೋರ್ದವನೆ ಸಿಕ್ಕಿದ ಹಿರಣ್ಯಾಕ್ಷನ ಸೀಳಿ ಬಂದವನೆ, ಬಲಿಯ ಮೆಟ್ಟಿ ಪಾತಾಳಗೈದವನೆ ಕೊಡಲಿಯನು ಪಿಡಿದು ಮಡುಹಿದನಿವನೆ ಶಶಿ ಮುಖಿ ಸೀತಾಂಗನೆಗೆ ಅರಸನಾದವನೆ, ಗೋಕುಲದಲ್ಲಿ ಬೆಳೆದ ಗೊಲ್ಲನು ಇವನೆ, ಗೋಪಿ ವಂಶಕರಿಗೆ ಪ್ರೀತಿ ತೋರವನೆ, ಕಲಿಯ ತುರಗವನೇರಿ ಖಡ್ಗವನ್ನೇ ಪಿಡಿದು ಮೆರೆದ ಶ್ರೀ ವರಿ ವೇಂಕಟಾಚಲನೂ ಎಲೇಲೋ ಶ್ರೀನಿವಾಸ 3

೭೫

# ಚುಟುಕುಶ್ರೀನಿವಾಸ ಕಲ್ಯಾಣ

ಮಂಗಳಂ ಜಯಮಂಗಳಂ ||ಪ||

ವರವೈಕುಂಠದಿ ಬಂದವಗೇ ವರಗಿರಿಯಲಿ ಸಂಚರಿಸುವಗೆ
ವರಹದೇವನ ಅನುಸರಿಸಿಸ್ವಾಮಿ ಪುಷ್ಕರಿಣಿ ತೀರದಲ್ಲಿರುವವಗೆ 1

ಸರಸದಿ ಬೇಟೆಗೆ ಹೊರಟವಗೆ, ಸರಸಿಜಾಕ್ಷಿಯಳ ಕಂಡವಗೆ
ಮರುಳಾಟದಿ ತಾ ಪರವಶನಾಗುತ, ಕೊರವಿವೇಷ ಧರಿಸಿರುವವಗೆ 2

ಗಗನರಾಜನ ಪುರಕ್ಹೋದವಗೆ ಬಗೆ ಬಗೆ ನುಡಿಗಳ ನುಡಿದವಗೆ,
ಅಗವಾಸಿಗೆ ನಿನ್ನ ಮಗಳನು ಕೊಡು ಎಂದು ಗಗನ ರಾಜನ
ಸತಿಗ್ಹೇಳಿದವಗೆ 3

ತನ್ನ ಕಾರ್ಯತಾ ಮಾಡಿದವಗೆ, ಇನ್ನೊಬ್ಬರ ಹೆಸರ್ಹೇಳಿದವಗೆ, ಮುನ್ನ
ಮದುವೆ ನಿಶ್ಚಯವಾಗಿರಲು, ತನ್ನ ಬಳಗ ಕರಸಿರುವವಗೆ 4

ಎತ್ತಿ ನಿಬ್ಬಣ ಹೊರಟವಗೆ, ನಿತ್ಯ ತೃಪ್ತನಾಗಿರುವವಗೆ। ಉತ್ತರಣಿಯ
ಓಗುರನುಂಡು, ತೃಪ್ತನಾಗಿ ತೇಗಿರುವವಗೆ 5

ಒದಗಿ ಮುಹೂರ್ತಕೆ ಬಂದವಗೆ। ಸದಯಹೃದಯನಾಗಿರುವವಗೆ
ಮುದದಿಂದ ಶ್ರೀ ಪದುಮಾವತಿಯಳನು ಮದುವೆ ಮಾಡಿಕೊಂಡ
ಮದುಮಗಗೆ 6

ಕಾಂತೆಯಿಂದ ಸಹಿತಾದವಗೆ, ಸಂತೋಷದಿ ಕುಳಿತಿರುವವಗೆ,

ಸಂತತ ಶ್ರೀ ಮಹಾದನಾಂತಾದ್ರೀಶಗೆ, ಶಾಂತಮೂರುತಿ
ಸರ್ವೋತ್ತಮಗೆ 7

ಮಂಗಳ ಜಯಮಂಗಳ-ಮಂಗಳಾಶುಭಮಂಗಳ



ಡಾ || ಶ್ರೀಮತಿ ರುಕ್ಮಿಣಿ ಗಿರಿಮಾಜಿ ಇವರು ಕನ್ನಡ ಸಾಹಿತ್ಯ, ಸಂಸ್ಕೃತಿ, ವಿಚಾರ ಸಾಹಿತ್ಯ, ಪ್ರಬಂಧ ಧಾರ್ಮಿಕ ವಿಚಾರಗಳಿಂದ ಕೂಡಿದ ಲೇಖನ ಮೊದಲಾದವುಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಹಾಗೂ ಸಮಾಜ ಜೀವನದಲ್ಲಿ ತುಂಬ ಹೆಸರು ವಾಸಿಯಾಗಿದ್ದಾರೆ ಅ.ಭಾ.ಮಾ. ಮಹಾಮಂಡಲ ಹಾಗೂ ತತ್ವವಾದ ಪತ್ರಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದಾರೆ. ತಿರುಮಲೆ ತಿರುಪತಿ ದಾಸ ಸಾಹಿತ್ಯದ ಪ್ರಾಜಕ್ಟದಲ್ಲಿಯೂ ಇವರ ಸೇವೆಯು ಶ್ರೀನಿವಾಸನಿಗರ್ಪಿತವಾಗಿದೆ, ಮಹಿಳಾ ಸಂಘಟನೆಗಳಲ್ಲಿ ವಿಶೇಷ ಆಸಕ್ತಿಯುಳ್ಳ ಗಿರಿಮಾಜಿಯವರು ಶಿಕ್ಷಣ ಕ್ಷೇತ್ರದಲ್ಲಿ ವಿಶೇಷ ಸೇವೆ ಸಲ್ಲಿಸಿರುವದರಿಂದ "ಶ್ರೀನಿವಾಸ ಕಲ್ಯಾಣ" ಇದು ಅವರ ಇಳಿ ವಯಸ್ಸಿನಲ್ಲಿ ರಚಿತವಾದ ಸಮರ್ಪಣಾ ಭಾವದ ಕೃತಿಯಾಗಿದೆ, ಶ್ರೀನಿವಾಸನ ಸೇವೆಯು ಇನ್ನೂ ಹೆಚ್ಚಾಗಿ ಅವರಿಂದಾಗಲಿ ಎಂದು ಆ ದೇವನಲ್ಲಿ ಪ್ರಾರ್ಥನೆ.